A SHORT

# DESCRIPTION OF GREAT BRITAIN AND IRELAND

(with special reference to the History of England)

WITH THREE APPENDICES.



ಮೂರು ಪರಿಶಿಷ್ಟಗಳಿಂದೊಡಗೂಡಿದ

(ಇಂಗ್ಲಂಡದ ಇತಿಹಾಸಕ್ಕೆ ಸಂಬಂಧಿಸಿದಷ್ಟು)

# ಗ್ರೇಟಬ್ರಿಟನ್ ಅಯರ್ಲಂಡ ದೇಶಗಳ

ಸಂಕ್ಷಿಪ್ತ ವರ್ಣನೆಯು.

ಬೆಲೆ ೬ ಆಣೆ.] [Price 6 Annas.

A SHORT

# DESCRIPTION OF GREAT BRITAIN AND IRELAND

(with special reference to the History of England)

WITH THREE APPENDICES

BY

**R. H. DESAPÂNDE M. A.**

*2nd edition, Revised and Enlarged.*



---

ಮೂರು ಪರಿಶಿಷ್ಟಗಳಿಂದೊಡಗೂಡಿದ

(ಇಂಗ್ಲಂಡದ ಇತಿಹಾಸಕ್ಕೆ ಸಂಬಂಧಿಸಿದಷ್ಟು)

# ಗ್ರೇಟಬ್ರಿಟನ್ ಅಯರ್ಲಂಡ್ ದೇಶಗಳ

ಸಂಕ್ಷಿಪ್ತ ವರ್ಣನೆಯು.

ರಾಮಚಂದ್ರ ಹಣಮಂತ ದೇಶಪಾಂಡೆ ಎಮ್. ಎ.

ಇವರು ಬರೆದದ್ದು.

ತಿದ್ದಿ ಬೆಳಸಿದ ೨ನೆಯಾವೃತ್ತಿ.




(ಈ ಪುಸ್ತಕ ... ತಮ್ಮ

DEDICATED

(OUT OF AFFECTION)

TO

**Alt the students of the Kannada Languagc,**

BY

**THE WRITER.**

---

ಈ ಚಿಕ್ಕ ಪುಸ್ತಕವನ್ನು

ಎಲ್ಲ ಕನ್ನಡ-ನುಡಿಯ

ವಿದ್ಯಾರ್ಥಿಗಳಿಗೆ

ಗ್ರಂಥಕರ್ತರು

ನಲುವಿನಿಂದ

ಕಾಣಿಕೆಯಾಗಿ ಕೊಟ್ಟಿರುತ್ತಾರೆ.

---

## PREFACE TO THE 2ND EDITION.

It is only last year that the first edition of this book was issued and its sale within such a short time, is certainly a matter for congratulation and bespeaks the usefulness of the book. I have now thoroughly revised and enlarged it, omitting such places as were of little importance and inserting as much useful and interesting information as I could possibly get. Three appendices, the first containing descriptions of foreign places referred to in the History of England, the second, questions set at the various college examinations, and the third, enumerating the various colonies and dependencies of the British Crown have been added with a view to make the book more useful to students and impress the reader with the magnitude and importance of the British Empire.

This book though originally intended for Training College students has been used by students of English Schools with advantage. Boys in English Standard IV find it very difficult either to pronounce correctly or to understand the description of places given in English books. I can say from personal experience that these boys will find it very easy

to master the subject from a book like this during the first term, and then revise the same with the help of an English Geography if necessary.

In conclusion I beg to thank all the authors that I had to consult in writing this *short description*, and all those gentlemen that kindly extended their patronage to my Kannada publications, and request them to be good enough to make such suggestions as they might think proper for the improvement of this and other books of mine.

DHÂRWÂD, 30th July 1893. R. H. DESAPANDE.

## Kannada books by the same.

| | | | | |
|---|---|---|---|---|
| 1 | Life of Chaitanya | Price Annas | 3 | 0 |
| 2 | Charitra Sangraha part I | ,, ,, | 5 | 6 |
| 3 | Do. Do. II | ,, ,, | 8 | 0 |
| 4 | Do. Do. III | In the press. | | |
| 5 | Life of Akbar | | | |
| 6 | A short History of Kannada Literature (under preparation.) | | | |

---

ದೇಶಪಾಂಡೆ ರಾಮಚಂದ್ರರಾಯರು ಬರೆದ
ಕನ್ನಡ ಪುಸ್ತಕಗಳು.

| | | | | |
|---|---|---|---|---|
| ೧ | ಚೈತನ್ಯ ಚರಿತ್ರ | ಬೆಲೆಯಾಣೆ | ೩ | ೦ |
| ೨ | ಚರಿತ್ರ ಸಂಗ್ರಹ ೧ನೆಯ ಭಾಗ | ,, | ೫ | ೬ |
| ೩ | ,, ೨ ,, | ,, | ೮ | ೦ |
| ೪ | ,, ೩ ,, | (ಅಚ್ಚಾಗುತ್ತಲಿವೆ.) | | |
| ೫ | ಅಕಬರನ ಚರಿತ್ರ | | | |
| ೬ | ಕನ್ನಡನುಡಿಯಿತಿಹಾಸವು | (ಸಿದ್ಧವಾಗುತ್ತಿದೆ.) | | |

---

# ಅನುಕ್ರಮಣಿಕೆಯು.





# ಇಂಗ್ಲಂಡವೇಲ್ಸ ದೇಶಗಳು.



ಮೇರೆಗಳು–ಉತ್ತರಕ್ಕೆ ಸ್ಕಾಟಲಂಡವು. ಪಶ್ಚಿಮಕ್ಕೆ ಅಯರಿಶ್‌ಕಡಲೂ, ಸೆಂಟಜಾರ್ಜಕೊಲ್ಲೆಯೂ. ದಕ್ಷಿಣಕ್ಕೆ ಇಂಗ್ಲಿಷಕೊಲ್ಲೆಯು. ಪೂರ್ವಕ್ಕೆ ಬಡಗಣಕಡಲು.

ಈ ದೇಶದ ವಿಸ್ತಾರವು ಉತ್ತರ ಅಕ್ಷಾಂಶ ೫೦" ರಿಂದ ೫೬"ರ ವರೆಗೂ ಪೂರ್ವರೇಖಾಂಶ ೨"ರಿಂದ ೬"ರ ವರೆಗೂ ಇರುತ್ತದೆ. ವೇಲ್ಸ ದೇಶವು ೧೨೮೪ರಲ್ಲಿ ಇಂಗ್ಲಂಡ ದೇಶಕ್ಕೆ ಕೂಡಿಸಲ್ಪಟ್ಟಿತು.

ಈ ದೇಶದ ತೀರ ಉತ್ತರಕ್ಕಿದ್ದ ಬರ್ವಿಕ್ಕ ಪಟ್ಟಣವು ಟ್ವೀಡ ಹೊಳೆಯ ದಂಡೆಯಮೇಲೆ ಅದೆ; ತೀರ ದಕ್ಷಿಣಕ್ಕೆ ಲಿಝರ್ಡ ಭೂಶಿರವದೆ; ಪೂರ್ವಕ್ಕೆ ಲೊವೆಸ್ಟಾಫ್ಟವೂ ಪಶ್ಚಿಮಕ್ಕೆ ಲ್ಯಾಂಡ್ಸೆಂಡವೂ ಇರುತ್ತವೆ.

ಬರ್ವಿಕ್ಕದಿಂದ ಲಿಝರ್ಡ ಭೂಶಿರದವರೆಗೆ ಇಂಗ್ಲಂಡದ ಕ್ಷಿಣೋತ್ತರ ಉದ್ದಳತೆಯು ೪೨೩ ಮೈಲು ಉಂಟು. ಲೊವೆಸ್ಟಾಫ್ಟನೆಸ್ಸದಿಂದ ಲ್ಯಾಂಡ್ಸೆಂಡದ ವರೆಗೆ ಇದರ ಪೂರ್ವಪಶ್ಚಿಮ ಅಗಲಳತೆಯು ೩೬೪ ಮೈಲು. ಇಂಗ್ಲಂಡ ವೇಲ್ಸ ದೇಶಗಳ ಕ್ಷೇತ್ರಫಲವು ೫೮೧೮೬ ಚಚ್ಚೌಕು ಮೈಲು; ಇದರಲ್ಲಿ ಇಂಗ್ಲಂಡದ್ದು ೫೦೮೨೩ ಚಚ್ಚೌಕು ಮೈಲು; ವೇಲ್ಸದ್ದು ೭೩೬೩ ಚಚ್ಚೌಕು ಮೈಲು. ನಮ್ಮ ಹಿಂದುಸ್ಥಾನದ ಕ್ಷೇತ್ರಫಲವು ೧೫೮೨೧೨೦ ಚಚ್ಚೌಕು ಮೈಲು ಇರುತ್ತದೆ. ಆದಕಾರಣ ನಮ್ಮ ದೇಶವು ಇಂಗ್ಲಂಡವೇಲ್ಸ

ಗಳಿಗಿಂತ ಸುಮಾರು ೨೬ ಪಟ್ಟು ಹೆಚ್ಚು ವಿಸ್ತಾರವುಳ್ಳದ್ದದೆ. *ಇಂಗ್ಲಂಡವೇಲ್ಸ ದೇಶಗಳ ಜನಸಂಖ್ಯೆ ೨,೫೯,೬೮,೨೮೬ ಉಂಟು. ನಮ್ಮ ದೇಶದ್ದು ಸುಮಾರು ೨೮ ಕೋಟಿಯದೆ. ಆದುದರಿಂದ ಇಂಗ್ಲಂಡವೇಲ್ಸಗಳಿಗಿಂತ ನಮ್ಮ ದೇಶದಲ್ಲಿ ೧೪ ಮಡಿ ಹೆಚ್ಚಿಗೆ ಜನರು ಇದ್ದಾರೆ. ಈ ದೇಶಗಳ ಭೂಮಿಯು ನಮ್ಮ ದೇಶದ ಭೂಮಿಯಷ್ಟು ಬೆಳೆಯುಳ್ಳದ್ದಲ್ಲ; ಮಳೆಯು ಕಡಿಮೆ; ಒಕ್ಕಲತನ ಸಾಧಾರಣವಾಗಿ ನಡೆಯುತ್ತದೆ; ಆದರೂ ವ್ಯಾಪಾರೋದ್ಯೋಗಗಳಲ್ಲಿ ಇದು ಬಹಳ ಮೇಲಾದದ್ದು. ಇಲ್ಲಿಯ ಜನರು ಉದ್ಯೋಗಿಗಳೂ ಸಾಹಸಿಕರೂ ಬುದ್ಧಿವಂತರೂ ಇರುತ್ತಾರೆ.

ಇಂಗ್ಲಂಡ ದೇಶದ ಜನರು ಟ್ಯೂಟೊನಿಕ್ ಕುಲದವರು; ಕಾರ್ನವಾಲ ವೇಲ್ಸಗಳ ಜನರು ಕೆಲ್ಟಿಕ್ ಕುಲದವರು. ಕೆಲ್ಟರೊಳಗೆ ಗಾಲರೆಂಬವರು ಮೊದಲು ಇಂಗ್ಲಂಡದ ದಕ್ಷಿಣದಲ್ಲಿರಹತ್ತಿದರು; ಮುಂದೆ ಕೆಲ್ಟಿಕ್ಕರ ಮತ್ತೊಂದು ವರ್ಗದವರಾದ ಕಯುಮ್ರಿ ಯೆಂಬ ಜನರು ಗಾಲರನ್ನು ಬಡಗಣಿಗೆ ಓಡಿಸಿ ತಾವು ಇಂಗ್ಲಂಡದ ದಕ್ಷಿಣದಲ್ಲಿಯೂ ವೇಲ್ಸದಲ್ಲಿ

* ಇಂಗ್ಲಂಡ ವೇಲ್ಸ ಸ್ಕಾಟಲಂಡ ಆಯರ್ಲಂಡ ಈ ದೇಶಗಳ ಕ್ಷೇತ್ರಫಲಜನಸಂಖ್ಯೆಗಳು :—

| | ಚಚ್ಚೌಕ ಮೈಲು. | ಜನಸಂಖ್ಯೆ. |
|---|---|---|
| ಇಂಗ್ಲಂಡ | ೫೦೮೨೩ | ೨,೪೬,೦೮,೩೯೧. |
| ವೇಲ್ಸ | ೭,೩೬೩ | ೧೩,೫೯,೮೯೫. |
| ಸ್ಕಾಟಲಂಡ | ೩೦,೪೬೩ | ೩೭,೩೪,೪೩೧. |
| ಆಯರ್ಲಂಡ | ೩೨,೫೩೧ | ೫೧,೫೯,೮೩೯. |
| ಪ್ರ್ಯಾನ್ಸ ನಡುಗಡ್ಡೆ | ೩೦೨ | ೧,೪೧,೨೨೩. |
| ಒಟ್ಟು… | ೧೨೧೪೮೨ | ೩,೫೦,೦೩,೬೮೯. |

ಯೂ ಇರಪತ್ತಿದರು. ಬಳಿಕ ಅಂಗ್ಲರೂ ಜೂಟರೂ ಸ್ಯಾ
ಕ್ಸನ್ನರೂ ಇಂಗ್ಲಂಡವನ್ನೊಳನುಗ್ಗಿ ಕಯುಮ್ರಿಯರನ್ನು
ಕಾರ್ನವಾಲ ವೇಲ್ಸ ಪ್ರದೇಶಗಳ ಹೊರತು ಉಳಿದ ಎಲ್ಲ
ಸ್ಥಳಗಳಿಂದೋಡಿಸಿ ಬಿಟ್ಟರು. ಬಳಿಕ ಕೆಲವು ಕಾಲದ
ಮೇಲೆ ಟ್ಯೂಟೊನಿಕ್ ಕುಲದವರಾದ ಡೇನರೂ ನಾರ್ಮ
ನ್ನರೂ ಇಂಗ್ಲಂಡದಲ್ಲಿ ಬಂದುಳಿದರು. ಈಯೆಲ್ಲ ವರ್ಗದ
ಜನರು ಕೂಡಿ ಈಗಿನ ಇಂಗ್ಲಿಷ ಜನಾಂಗವಾಗಿರುತ್ತದೆ.
ಆದುದರಿಂದ ಇಂಗ್ಲಿಷ ಭಾಷೆಯು ಲಾಟಿನ್, ಗ್ರೀಕ, ಅಂ
ಗ್ಲೋಸಾಕ್ಸನ್, ನಾರ್ಮನ್, ಫ್ರೆಂಚ ಮುಂತಾದ ಭಾಷೆ
ಗಳ ಮಿಶ್ರಣವಿರುತ್ತದೆ. ಮ್ಯಾನ್ ನಡುಗಡ್ಡೆಯಲ್ಲಿ ಮಾಂ
ಕ್ಸವೆಂಬ ಕೆಲ್ಟಿಕ್ ಭಾಷೆಯು ನಡೆಯುತ್ತದೆ. ಚಾನಲ್
ನಡುಗಡ್ಡೆಯ ಜನರು ಫ್ರೆಂಚ ನುಡಿಯನ್ನಾಡುತ್ತಾರೆ.

ಹೋರೆಗಳು—ಕಳೆದ ಶತಮಾನದಲ್ಲಿ ಇಂಗ್ಲಿಷರು ಬ
ಹುಶಃ ಕೃಷಿಕರ್ಮದಲ್ಲಿಯೇ ತೊಡಗಿದ್ದರು. ಇದೇ ಶತ
ಮಾನದಲ್ಲಿ ಯಂತ್ರಗಳ ಶೋಧವಾದುದರಿಂದ ಈ ದೇಶದ
ಕಾರಖಾನೆಗಳೂ ವ್ಯಾಪಾರವೂ ಬಹಳವಾಗಿ ಬೆಳೆದಿರುತ್ತವೆ.
ಆದುದರಿಂದ ಈಗ ಬೇರೆ ಬೇರೆ ತರದ ಸರಕುಗಳನ್ನು
ಹುಟ್ಟಿಸುವದರಲ್ಲಿಯೂ ಪರದೇಶಗಳ ಕೂಡ ವ್ಯಾಪಾರ
ಮಾಡುವದರಲ್ಲಿಯೂ ಇಂಗ್ಲಂಡವು ಪೃಥ್ವಿಯೊಳಗಿನ ಎಲ್ಲ
ದೇಶಗಳಿಗೆ ಮೇಲಾಗಿರುತ್ತದೆ. ಈಕಾಲಕ್ಕೆ ಇಂಗ್ಲಂಡ
ದಲ್ಲಿ ಬೆಳೆಯುವ ಧಾನ್ಯಗಳಿಂದ ಅಲ್ಲಿಯ ಜನರ ಹೊಟ್ಟೆಯು
ಸಾಗುವದಿಲ್ಲ. ಆದುದರಿಂದ ಪರದೇಶಗಳಿಂದ ಧಾನ್ಯವು
ಬಂದ ಹೊರತು ಇಂಗ್ಲಿಷರ ಚರಿತಾರ್ಥವು ಸಾಗುವಂತಿಲ್ಲ.

ಕೃಷಿಕರ್ಮ—ಕೆಂಟ, ಇಸೆಕ್ಸ, ಸಫಾಕ, ನಾರ್ಫಾಕ,

ಹ್ಯಾಂಪ, ಬರ್ಕ, ಬೆಡ್ಫರ್ಡ, ಸರೆ, ಸಸೆಕ್ಸ ಮುಂತಾದ ಪರಗಣೆಗಳಲ್ಲಿಯೂ ಲಿಂಕನ್, ಯಾರ್ಕ, ಡರ್ಹ್ಯಾಮ್, ನಾರ್ಥಂಬರ್ಲಂಡ ಈ ಪರಗಣೆಗಳ ಕೆಲವು ಭಾಗಗಳಲ್ಲಿಯೂ ಜನರು ಕೃಷಿಕರ್ಮವನ್ನೂ ದನಗಳ ಜೋಪಾನವನ್ನೂ ಹೆಚ್ಚಾಗಿ ಮಾಡುತ್ತಾರೆ. ಚೆಸ್ಟರ, ಸ್ರಾಪ, ಗ್ಲಾಸ್ಟರ, ಉಯಿಲ್ಟ್ಸ, ಬಕಿಂಗ್ಹ್ಯಾಮ್, ಇಸೆಕ್ಸ, ಯಾರ್ಕ, ಡರ್ಬಿ, ಕೇಂಬ್ರಿಜ್ಜ, ಡಾರ್ಸೆಟ್ಟ, ಡೆವ್ಹನ್ ಈ ಪರಗಣೆಗಳಲ್ಲಿಯು ಜನರು ಪೈನ ಮಾಡುತ್ತಾರೆ, ಮತ್ತು ಇವುಗಳಲ್ಲಿ ಗೋದಿ, ಓಟ, ಜವೆಗೋದಿ, ಚಿಕ್ಕಗೋದಿ ಮುಂತಾದ ಧಾನ್ಯಗಳು ಬಹಳವಾಗಿ ಬೆಳೆಯುತ್ತವೆ. ಕೆಂಟ, ಸರೆ, ಉರ್ಸ್ಟರ, ಹರಫರ್ಡ ಈ ಪರಗಣೆಗಳಲ್ಲಿ ವಿಶೇಷವಾಗಿ ಹಾಪ್ಸವನ್ನು (ಅಮಟಿಯ ಕಾಯಿ?) ಬೆಳೆಯುತ್ತಾರೆ. ಆಲುಗಡ್ಡೆಯು ಲಾಂಕಾಸ್ಟರ, ಕಂಬರ್ಲಂಡ, ಚೆಸ್ಟರ ಈ ಪರಗಣೆಗಳಲ್ಲಿ ಬೆಳೆಯುತ್ತದೆ. ಟರ್ನಿಪ್ಸವೆಂಬ (ಸವಿಮೂಲಂಗಿ) ಗಡ್ಡೆಯು ನಾರ್ಫಾಕ ಪರಗಣೆಯಲ್ಲಿ ಬೆಳೆಯುತ್ತದೆ. ರೇಪವೆಂಬ ಧಾನ್ಯವು ಲಿಂಕನ್ ಕೇಂಬ್ರಿಜ್ಜ ಪರಗಣೆಗಳಲ್ಲಿ ಬೆಳೆಯುತ್ತದೆ. ಸಣಬುಪ್ಪುಂಡಿಗಳು ಲಿಂಕನ ಸಫಾಕ ಪರಗಣೆಗಳಲ್ಲಿ ಪುಟ್ಟುತ್ತವೆ. ಲಂಡನ್ನದ ನೆರೆಯಲ್ಲಿ ಹಣ್ಣುಹಂಪಲ ಕಾಯಿಪಲ್ಯಗಳನ್ನು ಬೆಳೆಸುತ್ತಾರೆ. ಹರಫರ್ಡ ಡೆವ್ಹನ್ ಪರಗಣೆಗಳಲ್ಲಿ ಸೇಬಿನಹಣ್ಣುಗಳು ಬಹಳವಾಗಿ ಆಗುತ್ತವೆ. ಈ ಹಣ್ಣಿನಿಂದ ಒಂದು ತರದ ಮದ್ಯಮಾಡುತ್ತಾರೆ. ಇಂಗ್ಲಂಡ ವೇಲ್ಸಗಳಲ್ಲಿ ೨,೮೩,೪೫೦೦೦ ಎಕರೆ ಭೂಮಿಯು ಸಾಗಾಗಿರುತ್ತದೆ; ೬,೮೩,೩೫೦೦೦ ಎಕರೆ ಭೂಮಿಯು ಬೀಳು ಇರುತ್ತದೆ.

ಕಮ್ಗಾರಿಕೆಯೊಡವೆಗಳು—ಇಂಗ್ಲಂಡದಲ್ಲಿ ಅರಳೆಯು ಣ್ಣೆಕಬ್ಬಿಣಗಳ ಕಾರಖಾನೆಗಳು ಮುಖ್ಯವಾಗಿರುತ್ತವೆ. ಅರಳೆಯು ಮುಖ್ಯವಾಗಿ ಸಂಯುಕ್ತಸಂಸ್ಥಾನಗಳಿಂದ ಬರುತ್ತದೆ. ಉಣ್ಣೆಯು ಇಂಗ್ಲಂಡದಲ್ಲಿಯೇ ದೊರೆಯುತ್ತದೆ; ಮತ್ತು ಆಸ್ಟ್ರೇಲಿಯಾ ತೆಂಕಣ ಆಫ್ರಿಕಾ ಇವುಗಳಿಂದ ಕೆಲಮಟ್ಟಿಗೆ ಆಮದವಾಗುತ್ತದೆ. ಕಬ್ಬಿಣವು ಇಂಗ್ಲಂಡದಲ್ಲಿಯೇ ಹೇರಳವಾಗಿ ದೊರೆಯುತ್ತದೆ. ಲಾಂಕಾಸ್ಟರ, ಚೆಸ್ಟರ ಈ ಪರಗಣೆಗಳಲ್ಲಿ ಅರಳೆಯ ಕಾರಖಾನೆಗಳು ಹೆಚ್ಚಾಗಿರುತ್ತವೆ. ಈ ಕಾರಖಾನೆಗಳಲ್ಲಿ ಕೆಲಸ ಮಾಡುವವರಷ್ಟು ಜನರು ಉಳಿದ ಆವ ಕಾರಖಾನೆಗಳಲ್ಲಿಯೂ ಇಲ್ಲ. ಈ ಕಾರಖಾನೆಗಳ ಮುಖ್ಯವಾದ ಪಟ್ಟಣವು ಮೊಂಚೆಸ್ಟರವು, ಮುಖ್ಯವಾದ ಬಂದರವು ಲಿವ್ಹರಪೂಲವು. ಯಾರ್ಕ್‌ಪರಗಣೆಯುಲ್ಲಿದ್ದ ಪಶ್ಚಿಮ ರೈಡಿಂಗವೆಂಬ ಭಾಗದಲ್ಲಿ ಉಣ್ಣೆಯ ಕಾರಖಾನೆಗಳಿರುತ್ತವೆ. ಲೀಡ್ಸ, ಬ್ರಾಡ್ಫರ್ಡ ಈ ಪಟ್ಟಣಗಳಲ್ಲಿ ಈ ಕಾರಖಾನೆಗಳು ಬಹಳವಾಗಿರುತ್ತವೆ. ಸ್ಟಾಫರ್ಡ, ವಾರ್ವಿಕ್ಕ, ಉಸ್ಟರ, ಶ್ರಾಪ ಈ ಪರಗಣೆಗಳಲ್ಲಿ ಕಬ್ಬಿಣದ ಸಾಮಾನುಗಳಾಗುತ್ತವೆ; ಬರ್ಮಿಂಗ್ಹ್ಯಾಮ ಪಟ್ಟಣವು ಇವುಗಳಬಗ್ಗೆ ಹೆಸರಾದದ್ದು. ಸ್ಟಾಫರ್ಡದ ಉತ್ತರಭಾಗದಲ್ಲಿ ಮಣ್ಣಿನ ಪಾತ್ರೆಗಳನ್ನು ಬಹಳವಾಗಿ ಮಾಡುತ್ತಾರೆ. ಆದುದರಿಂದ ಈ ಭಾಗಕ್ಕೆ ಮಣ್ಣಿನಪಾತ್ರೆಗಳ ಪ್ರಾಂತವೆನ್ನುತ್ತಾರೆ. ಈ ಎಲ್ಲ ಕಾರಖಾನೆಗಳ ಹೊರತು ರೇಶಿಮೆಯ ವಸ್ತ್ರ, ಜರ, ತೊಗಲಿನ ಸಾಮಾನು, ನಾರುಬಟ್ಟೆಗಳು, ಕಾಜು, ಕಾಗದ, ಗಡಿಯಾಳ ಮುಂತಾದ ಸಾಮಾನುಗಳು ಕೆಲಮಟ್ಟಿಗೆ ಆಗುತ್ತವೆ.

ವ್ಯಾಪಾರ—ಇಂಗ್ಲಂಡದ ವ್ಯಾಪಾರವು ಇಡಿಪೃಥ್ವಿಯಲ್ಲಿ ಹಬ್ಬಿರುತ್ತದೆ. ೧೮೮೧ರಲ್ಲಿ ಇಂಗ್ಲಂಡ, ವೇಲ್ಸ, ಸ್ಕಾಟಲಂಡ, ಅಯರ್ಲಂಡ ಈ ದೇಶಗಳಿಂದ ೨೯,೭,೦,೦೦,೦೦೦ ಪೌಂಡು ಬೆಲೆಯುಳ್ಳ ಸರಕುಗಳು ರಫ್ತವಾದವು. ಇವುಗಳಲ್ಲಿ ಮುಖ್ಯವಾದವುಗಳಾವವೆಂದರೆ:—ನೂಲಿನ ಬಟ್ಟೆಗಳು, ಉಣ್ಣೆಯ ಬಟ್ಟೆಗಳು, ಕಬ್ಬಿಣದ ಸಾಮಾನುಗಳು, ಉಕ್ಕಿನ ಸಾಮಾನುಗಳು, ಉಗೆಯಂತ್ರಗಳು, ತೊಗಲಿನ ಸಾಮಾನುಗಳು, ರೇಶಿಮೆಯ ವಸ್ತ್ರಗಳು, ಕಾಜು, ಮಣ್ಣಿನಪಾತ್ರೆಗಳು, ಸಾರಾಯಿ ಮುಂತಾದವುಗಳು. ಅದೇವರ್ಷ ೩೯,೭೦,೦೦,೦೦೦ ಪೌಂಡು ಬೆಲೆಯುಳ್ಳ ಸರಕುಗಳು ಆಮದವಾದವು. ಅವುಗಳ ವಿವರವು ಕೆಳಗೆ ಬರೆದಂತೆ ಯಿರುತ್ತದೆ,—

೧. ಅಕ್ಕಿ—ಸಂಯುಕ್ತಸಂಸ್ಥಾನ, ವೆಸ್ಟ ಇಂಡೀಜ ದ್ವೀಪಗಳಿಂದ.

೨. ಸಾಬೂಅಕ್ಕಿ—ವೆಸ್ಟ ಇಂಡೀಜ, ದಕ್ಷಿಣ ಅಮೇರಿಕಾ ಇವುಗಳಿಂದ.

೩. ಸುಂಟಿ, ಮೆಣಸು, ಜಾಜಿಕಾಯಿ, ಯಾಲಕ್ಕಿ ಮುಂತಾದವುಗಳು ವೆಸ್ಟ ಇಂಡೀಜ ಸಿಲೋನಗಳಿಂದ.

೪. ಹಣ್ಣುಗಳು—ಸ್ಪೇನ, ಪೋರ್ತುಗಾಲ, ತುರ್ಕಸ್ಥಾನ ಈ ದೇಶಗಳಿಂದ.

೫. ಅರಳೆ—ಹಿಂದುಸ್ಥಾನ, ಇಜಿಪ್ತ, ಬ್ರಾಝಿಲ್ಲ, ಪೂರ್ವದ್ವೀಪಕಲ್ಪಗಳು, ಸಂಯುಕ್ತಸಂಸ್ಥಾನ ಇವುಗಳಿಂದ.

೬. ಉಣ್ಣೆ—ಅಸ್ಟ್ರೇಲಿಯಾ, ಕೇಪಆಫಗುಡ್ಡಹೋಪ, ವೆಸ್ಟ ಇಂಡೀಜ, ಜರ್ಮನಿ, ದಕ್ಷಿಣ ಅಮೇರಿಕಾ ಇವುಗಳಿಂದ.

೭. ಅಲಪಾಕು—ದಕ್ಷಿಣ ಅಮೇರಿಕದಿಂದ.

೮. ರೇಶಿಮೆ—ಹಿಂದುಸ್ಥಾನ, ಇಟಲಿ, ಚೀನ, ಫ್ರಾನ್ಸ ಈ ದೇಶಗಳಿಂದ.

೯. ನಾರು—ನಾರ್ವೆ, ರಶಿಯಾ, ಸ್ವೀಡನ್ನ ಈ ದೇಶಗಳಿಂದ.

೧೦. ಪುಂಡಿ—ರಶಿಯಾ, ಈಸ್ಟಇಂಡೀಜ ಇವುಗಳಿಂದ.

೧೧. ತೊಗಲು—ರಶಿಯಾ, ಹಿಂದುಸ್ಥಾನ, ಕೇಪಆಫಗುಡ್ಡಹೋಪ, ದಕ್ಷಿಣ ಅಮೇರಿಕಾ ಇವುಗಳಿಂದ.

೧೨. ತೊಲೆ—ಕಾನಡಾ, ನ್ಯೂಫೌಂಡಲಂಡ, ಪ್ರಶಿಯಾ, ರಶಿಯಾ, ಸ್ವೀಡನ್ನ, ನಾರ್ವೆ, ಹಿಂದುಸ್ಥಾನ, ಆಫ್ರಿಕಾ ಇವುಗಳಿಂದ.

೧೩. ಚಹಾ—ಚೀನದಿಂದ.

೧೪. ಬುಂದು—ಸಿಂಹಲದ್ವೀಪ, ಮಧ್ಯ ಅಮೇರಿಕಾ, ವೆಸ್ಟ ಇಂಡೀಜ, ಬ್ರಾಝಿಲ್ಲ ಇವುಗಳಿಂದ.

೧೫. ಸಕ್ಕರೆ—ವೆಸ್ಟ ಇಂಡೀಜ, ಈಸ್ಟ ಇಂಡೀಜ, ಮಾರಿಶಸ್ಸ, ಕ್ಯೂಬಾ, ಬ್ರಾಝಿಲ್ಲ, ಇವುಗಳಿಂದ.

೧೬. ಮದ್ಯ—ಫ್ರಾನ್ಸ, ಜಮೇಕಾ, ವೆಸ್ಟ ಇಂಡೀಜ, ಸ್ಪೇನ, ಪೋರ್ತುಗಾಲ, ಸಿಸಿಲೀ, ಜರ್ಮನಿ, ಇಟಲಿ, ಇವುಗಳಿಂದ.

೧೭. ಎಣ್ಣೆ—ಆಫ್ರಿಕಾ, ಇಟಲಿ, ಸ್ಪೇನ, ತುರ್ಕಸ್ಥಾನ, ಹಾಲಂಡ, ಜರ್ಮನಿ, ಈಸ್ಟ ಇಂಡೀಜ ಇವುಗಳಿಂದ.

೧೮. ಕಾಳುಗಳು—ರಶಿಯಾ, ಪ್ರಶಿಯಾ, ಸಂಯುಕ್ತ ರಾಜ್ಯ. ಫ್ರಾನ್ಸ, ತುರ್ಕಸ್ಥಾನ, ಕಾನಡಾ, ಡೆನ್ಮಾರ್ಕ, ಜರ್ಮನಿ, ಆಸ್ಟ್ರಿಯಾ, ಹಂಗರಿ ಮುಂತಾದ ದೇಶಗಳಿಂದ.

ಇಂಗ್ಲಂಡದ ರಾಷ್ಟ್ರೀಯ ಸಾಲವು ೬೬೩,೦೦೦,೦೦೦ ಪೌಂಡು ಇರುತ್ತದೆ. ಇಂಗ್ಲಂಡದ ವಾರ್ಷಿಕ ಉತ್ಪನ್ನವು ೮,೬೦,೦೦,೦೦೦ ಪೌಂಡು ಇರುತ್ತದೆ. ಹಿಂದುಸ್ಥಾನದ ವಾರ್ಷಿಕ ಉತ್ಪನ್ನವು ೩,೦೦,೦೦,೦೦೦ ಪೌಂಡು. ಇಂಗ್ಲಂಡದ ಜನರ ಆಸ್ತಿಯ ಬೆಲೆಯು ೩೨೦೦೦,೦೦೦,೦೦೦ ಪೌಂಡು ಇರುತ್ತದೆ.

ಟೇಮ್ಸನದಿಗೆ ೩ ಪೂಲುಗಳುಂಟು; ಇವುಗಳಲ್ಲಿ ವಾಟರ್ಲೂ ಎಂಬುದು ೧೩–೬ ಅಡಿಯುದ್ದವದೆ.

ರಾಜ್ಯಪದ್ಧತಿ—ಇಂಗ್ಲಂಡ, ಸ್ಕಾಟಲಂಡ, ಅಯರ್ಲಂಡ ಈ ಮೂರು ದೇಶಗಳು ಒಬ್ಬ ಅರಸಿನ ಕಯ್ಕೆಳಗೆ ಇರುತ್ತವೆ. ಇಲ್ಲಿ ರಾಜಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯು ನಡೆಯುತ್ತದೆ. ಅರಸನು, ಸರದಾರರ ಸಭೆಯು, ಪ್ರಜಾಸಭೆಯು ಈಮೇರೆಗೆ ಇಲ್ಲಿಯ ಸರಕಾರದ ಮೂರು ವಿಭಾಗಗಳಿರುತ್ತವೆ. ಅರಸುತನವು ವಂಶಪರಂಪರವಾಗಿರುತ್ತದೆ. ಸರದಾರರ ಸಭೆಯ ಸಭಾಸದರನ್ನು ಅರಸನು ನಿಯಮಿಸುತ್ತಾನೆ. ಪ್ರಜಾಸಭೆಯಲ್ಲಿ ೬೭೮ ಮಂದಿ ಪ್ರಜಾಪ್ರತಿನಿಧಿಗಳಿರುತ್ತಾರೆ. ಇವರಲ್ಲಿ ಇಂಗ್ಲಿಷರು ಆರಿಸಿದವರು ೪೯೩ ಮಂದಿಯೂ, ಸ್ಕಾಟ್ಟರು ಆರಿಸಿದವರು ೬೦ ಜನರೂ, ಅಯರ್ಲಂಡದ ಜನರು ಆರಿಸಿದವರು ೧೦೫ ಮಂದಿಯೂ ಇರುತ್ತಾರೆ. ಅರಸನು ಪ್ರಜಾಸಭೆಯ ಒಪ್ಪಿಗೆಯ ಹೊರತು ತೆರಿಗೆಗಳನ್ನು ಕಟ್ಟಲಾರನು. ಸಾಧಾರಣವಾಗಿ ಹಣದ ಸಂಬಂಧವಿದ್ದಲ್ಲಿ ಪ್ರಜಾಸಭೆಯ ಅನುಮತಿಯು ಅವಶ್ಯವಾಗಿ ಬೇಕು. ಅವದಾದರೊಂದು ಕಾಯಿದೆಯ ಟಿಪ್ಪಣಿಗೆ ಪ್ರಜಾಸಭೆ ಸರದಾರರ ಸಭೆ ಅರಸು ಈ ಮೂವ್ವರ ಒಪ್ಪಿಗೆ ದೊರೆ

ದರೆ ಅದು ಕಾಯಿದೆಯಾಗುತ್ತದೆ. ಪ್ರಜಾಸಭೆಯಲ್ಲಿ ಹೆಚ್ಚು ಮಂದಿ ಪ್ರತಿನಿಧಿಗಳನುಕೂಲರಾಗಿದ್ದವನೇ ಮುಖ್ಯ ಪ್ರಧಾನಿಯಾಗುತ್ತಾನೆ. ೫ ವರ್ಷಕ್ಕೊಮ್ಮೆ ಅಥವಾ ಅರಸಿನ ಮನಸ್ಸಿಗೆ ಬಂದರೆ ಅದಕ್ಕೂ ಮೊದಲು ಹೊಸ ಪ್ರತಿನಿಧಿಗಳನ್ನು ಜನರು ಆರಿಸುತ್ತಾರೆ.

ಖನಿಜಗಳು—ಇಂಗ್ಲಂಡ ವೇಲ್ಸ ದೇಶಗಳಲ್ಲಿ ಮನುಷ್ಯರಿಗೆ ಅವಶ್ಯವಾದ ಖನಿಜಗಳು ಅಂದರೆ ಕಲ್ಲಿದ್ದಲಿ ಕಬ್ಬಿಣ ತಾಮ್ರ ಸೀಸ ತವರ ಸತವು ಇವು ಹೇರಳವಾಗಿ ದೊರೆಯುತ್ತವೆ.

೧. ಕಲ್ಲಿದ್ದಲಿಯು—ಕಲ್ಲಿದ್ದಲಿಯು ಇಂಗ್ಲಂಡದ ಉತ್ತರ ಮಧ್ಯದ ಪರಗಣೆಗಳಲ್ಲಿಯೂ ವೇಲ್ಸದ ಉತ್ತರ ದಕ್ಷಿಣದ ಪರಗಣೆಗಳಲ್ಲಿಯೂ ವಿಪುಲವಾಗಿ ಹೊರಡುತ್ತದೆ. ೧೮೮೮ ರಲ್ಲಿ ಬೇರೆ ಬೇರೆ ಪರಗಣೆಗಳಲ್ಲಿ ಕಲ್ಲಿದ್ದಲಿಯು ಹೊರಟ ಪ್ರಮಾಣವನ್ನು ಕೆಳಗೆ ಕೊಟ್ಟಿರುತ್ತೇವೆ:—

| ಹೆಸರು. | ಟನ್ನಗಳು. |
| --- | --- |
| ಡರ್ಹ್ಯಾಮ್ | ೨,೯೬,೬೪,೮೮೨. |
| ಲಾಂಕಾಸ್ಟರ | ೨,೧೧,೭೬,೩೭೧. |
| ಯಾರ್ಕ | ೨,೦೫,೭೯,೯೬೦. |
| ಗ್ಲಾಮೊರ್ಗನ್ನ | ೧,೯೫,೯೪,೫೦೩. |
| ಸ್ಟಾಪರ್ಡ | ೧,೩೫,೨೮,೮೨೦. |
| ಡರ್ಬಿ | ೯೪,೦೫,೫೯೨. |
| ನಾರ್ಥಂಬರ್ಲಂಡ | ೮೦,೦೧,೬೨೮. |
| ಮನ್ಮೌಥ | ೬೮,೩೦,೭೮೧. |
| ನಾಟಿಂಗ್ಹಾಮ್ | ೫೯,೯೯,೬೬೬. |
| ಸಣ್ಣ ಸ್ಥಳಗಳು | ೧,೨೮೦೭,೭೯೮. |

೨. ಕಬ್ಬಿಣದ ಅದರುಗಳು ಕಲ್ಲಿದ್ದಲಿಯು ದೊರೆಯುವ ಎಲ್ಲ ಪರಗಣೆಗಳಲ್ಲಿ ಸಿಗುತ್ತವೆ. ಆದರೆ ಅವುಗಳನ್ನು ತೆಗೆಯುವ ಕೆಲಸವು ವಿಶೇಷವಾಗಿ ವೇಲ್ಸದ ದಕ್ಷಿಣದಲ್ಲಿಯೂ ಸ್ಟ್ಯಾಫರ್ಡ, ಶ್ರಾಪ್, ಯಾರ್ಕ, ಡರ್ಬಿ, ಡರ್ಹ್ಯಾಮ್, ನಾರ್ಥಂಬರ್ಲಂಡ ಪರಗಣೆಗಳಲ್ಲಿಯೂ ನಡೆಯುತ್ತದೆ.

೩. ಸೀಸ—ಡರ್ಬಿ, ನಾರ್ಥಂಬರ್ಲಂಡ, ಕಂಬರ್ಲಂಡ, ಡೆವ್ಹನ್ನ ಪರಗಣೆಗಳಲ್ಲಿಯೂ ವೇಲ್ಸದ ಉತ್ತರ ದಕ್ಷಿಣ ಭಾಗಗಳಲ್ಲಿಯೂ ಇರುವ ಖನಿಜಗಳಲ್ಲಿ ಹೊರಡುತ್ತದೆ.

೪. ತಾಮ್ರವೂ ತವರವೂ ಡೆವ್ಹನ್ ಕಾರ್ನವಾಲ ಪರಗಣೆಗಳಲ್ಲಿ ವಿಶೇಷವಾಗಿ ದೊರೆಯುತ್ತವೆ.

೫. ಚೆಸ್ಟರಪರಗಣೆಯಲ್ಲಿ ಮರ್ಸಿ ಹೊಳೆಗೆ ಕೂಡುವ ವೀವ್ಹರ ಹೊಳೆಯ ದಂಡೆಗುಂಟ ಉಪ್ಪು ಹೇರಳವಾಗಿ ದೊರೆಯುತ್ತದೆ.

೬. ಚೆಲೊ ಸಂಗಮುರವರಿಯ ಕಲ್ಲುಗಳೂ ಮನೆಕಟ್ಟುವ ಕಲ್ಲುಗಳೂ ಇಂಗ್ಲಂಡದ ಉತ್ತರ ಮಧ್ಯ ವಾಯುವ್ಯ ಭಾಗಗಳಲ್ಲಿ ದೊರೆಯುತ್ತವೆ. ಪೋರ್ಟಲಂಡ ನಡುಗಡ್ಡೆಯಲ್ಲಿಯೂ ಡಾರ್ಸೆಟ್ ಪರಗಣೆಯಲ್ಲಿಯೂ ಚೆಲೊ ಮನೆ ಕಟ್ಟುವ ಕಲ್ಲುಗಳು ಸಿಗುತ್ತವೆ. ಮೂಡಣ ಪರಗಣೆಗಳಲ್ಲಿ ಈ ಕಲ್ಲುಗಳು ತೀರಕಡಿಮೆ. ಆದರೆ ಅಲ್ಲಿರುವ ಬಳಿತಾದ ಮಣ್ಣಿನ ಇಟ್ಟಂಗಿಗಳಿಂದ ಲಂಡನ್ನ ಮುಂತಾದ ದೊಡ್ಡ ದೊಡ್ಡ ಪಟ್ಟಣಗಳಲ್ಲಿರುವ ಅಂದವಾದ ಕಟ್ಟಣೆಗಳು ಕಟ್ಟಲ್ಪಟ್ಟಿರುತ್ತವೆ.

೭. ವೆಸ್ಟಮೋರ್ಲಂಡ ಕಂಬರ್ಲಂಡ ಪರಗಣೆಗಳಲ್ಲಿಯೂ ವೇಲ್ಸದಲ್ಲಿಯೂ ಪಾಟಿಕಲ್ಲುಗಳು ದೊರೆಯುತ್ತವೆ.

೮. ಬೆಲೆಯುಳ್ಳ ಧಾತುಗಳು ಇಂಗ್ಲಂಡದಲ್ಲಿ ಕಡಿಮೆ. ಆದರೂ ಸೀಸದ ಕಣಿಗಳಲ್ಲಿ ಬೆಳ್ಳಿಯು ದೊರೆಯುತ್ತದೆ; ಮತ್ತು ಮೇರಿಯಾನೆಥ ಪರಗಣೆಯೊಳಗಿದ್ದ ಡಾವೆಲಿಯೆಂಬಲ್ಲಿಯ ಕಲ್ಲುಗಳಲ್ಲಿ ಬಂಗಾರವಿರುತ್ತದೆಂದು ಇತ್ತಲಾಗಿ ಗೊತ್ತಾಗಿದೆ.

## ಉಗೆಬಂಡಿಯ ಮಾರ್ಗಗಳು.

ಇಂಗ್ಲಂಡ ದೇಶದಲ್ಲಿ ಮುಖ್ಯವಾದ ಉಗೆಬಂಡಿಯ ಮಾರ್ಗಗಳು ೯ ಇರುತ್ತವೆ. ಅವುಗಳಾವವೆಂದರೆ :—

೧ನೆಯದು—(ದೊಡ್ಡ ಉತ್ತರಮಾರ್ಗ)—ಇದು ಲಂಡನ್ನದಿಂದ ಹೊರಟು, ಬಾರ್ನೆಟ್ಟ, ಹಂಟಿಂಗ್ಡನ್ನ, ಪೀಟರಬರೋ, ನ್ಯೂಯಾರ್ಕ ಇವುಗಳ ಮೇಲೆ ಹಾಯ್ದು ಯಾರ್ಕಕ್ಕೆ ಹೋಗುತ್ತದೆ. ಇದರ ಶಾಖೆಗಳು ಬೋಸ್ಟನ್ನ, ಲಂಡನ್ನ, ಗೇನ್ಸಬರೋ, ಲೀಡ್ಸ, ಬ್ರಾಡಫರ್ಡ, ನ್ಯೂಕಾಸಲ್ಲ, ಬರ್ವಿಕ್ಕ ಈ ಪಟ್ಟಣಗಳಿಗೆ ಹೋಗುತ್ತವೆ.

೨ನೆಯದು—(ದೊಡ್ಡ ಪೂರ್ವದ ಮಾರ್ಗ)—ಇದರ ಭಾಗಗಳು ಮೂರಿರುತ್ತವೆ:—

(೧) ಕೆಂಬ್ರಿಜ್ಜದ ಭಾಗ—ಇದು ಲಂಡನ್ನದಿಂದ ಹೊರಟು ಕೆಂಬ್ರಿಜ್ಜ, ಇಲಾಯ್, ನಾರ್ವಿಚ್ಚ ಇವುಗಳ ಮೇಲೆ ಹಾಯ್ದು ಯಾರ್ಮಾಥಕ್ಕೆ ಹೋಗುತ್ತದೆ.

(೨) ಕೋಲ್ಚೆಸ್ಟರದ ಮಾರ್ಗ—ಇದು ಲಂಡನ್ನದಿಂದ ಹೊರಟು ಚೆಲ್ಮಸ್ಫರ್ಡ, ಕೋಲ್ಚೆಸ್ಟರ, ಇಪ್ಸವಿಚ್ಚ, ನಾರ್ವಿಚ್ಚ ಇವುಗಳ ಮೇಲಿಂದ ಲೊವೆಸ್ಟಾಫ್ಟಕ್ಕೆ ಹೋಗಿದೆ.

(೩) ಪೂರ್ವ ಸಫಾಕದ ಮಾರ್ಗ—ಇದು ಇಪ್ಸವಿಚ್ಚದಿಂದ ಹೊರಟು ಉಡ್ಬ್ರಿಜ್ಜ (ಸಫಾಕ) ಬ್ರೀಸಲ್ಸ (ನಾರ್ಫಾಕ) ಇವುಗಳ ಮೇಲಿಂದ ಯಾರ್ಮೌಥಕ್ಕೆ ಹೋಗಿದೆ.

೩ನೆಯದು—(ಆಗ್ನೇಯಮಾರ್ಗ)—ಇದರ ಶಾಖೆಗಳು ಲಂಡನ್ನದಿಂದ ಹೊರಟು ಡೋವ್ಹರಕ್ಕೂ, ಮಾರ್ಗೇಟಕ್ಕೂ ಮಿಡಸ್ಟೋನಕ್ಕೂ ಹೋಗುತ್ತವೆ.

೪ನೆಯದು—ಇದು ಲಂಡನ್ನದಿಂದ ರಾಚೆಸ್ಟರ, ಚೇಥ್ಯಾಮ, ಕ್ಯಾಂಟರ್ಬರಿ ಇವುಗಳಮೇಲಿಂದ ಡೋವ್ಹರಕ್ಕೆ ಹೋಗುತ್ತದೆ.

೫ನೆಯದು—ಇದು ಲಂಡನ್ನದಿಂದ ಬ್ರಾಯಿಟನ್ನಕ್ಕೂ ಹೆಸ್ಟಿಂಗ್ಸದಿಂದ ಬ್ರಾಯಿಟನ್ನ ಪೋರ್ಟ್ಸಮೌಥಗಳಿಗೂ ಹೋಗುತ್ತದೆ.

೬ನೆಯದು—(ನೈರುತ್ಯ ಮಾರ್ಗ)—ಇದು ಲಂಡನ್ನದಿಂದ ಪೋರ್ಟಲಂಡಕ್ಕೂ ರಾಯಿಡಕ್ಕೂ ರೀಡಿಂಗಕ್ಕೂ ಹೋಗುತ್ತದೆ.

೭ನೆಯದು—(ದೊಡ್ಡ ಪಡುವಣ ಮಾರ್ಗ)—ಲಂಡನ್ನದಿಂದ ಬ್ರಿಸ್ಟಲ್ಲಕ್ಕೂ ಪೋರ್ಟಲಂಡಕ್ಕೂ ಲಿವ್ಹರಪೂಲಕ್ಕೂ ಹೋಗುತ್ತದೆ.

೮ನೆಯದು—(ಈಶಾನ್ಯ ಮಾರ್ಗ)—ಲಂಡನ್ನದಿಂದ ಲಿಚ್ಚಫೀಲ್ಡ, ಪ್ರೆಸ್ಟನ್ನ ಲಾಂಕಾಸ್ಟರ ಇವುಗಳಮೇಲಿಂದ ಹಾಯುದ್ದ ಕಾರ್ಲಾಯಿಲಕ್ಕೆ ಹೋಗುತ್ತದೆ; ಮುಂದೆ ಲಿಚ್ಚಫೀಲ್ಡದಿಂದ ಶಾಖೆಗಳೊಡೆದು ಹೋಲಿಹೆಡ್ಡಕ್ಕೂ, ಪೆಂಬ್ರೋಕಕ್ಕೂ ಲೀಡ್ಸಕ್ಕೂ ಹೋಗುತ್ತವೆ.

೯ನೆಯದು— (ವಾಯುವ್ಯಮಾರ್ಗ).

## ಇಂಗ್ಲಂಡವು.

ಇಂಗ್ಲಂಡದಲ್ಲಿ ೪೦ ವೇಲ್ಸದಲ್ಲಿ ೧೨, ಹೀಗೆ ೫೨ ವಿಭಾಗಗಳು ಮಾಡಲ್ಪಟ್ಟಿರುತ್ತವೆ. ಅವುಗಳಿಗೆ ಪರಗಣೆಗಳೆನ್ನುತ್ತಾರೆ. ಅವುಗಳಾವವೆಂದರೆ:—

೧. ನಾರ್ಥಂಬರ್ಲಂಡ—ನ್ಯೂಕ್ಯಾಸಲ್ಲ, ಇದು ಟೈನ ಹೊಳೆಯ ಮೇಲೆ ಇರುತ್ತದೆ; ಇಲ್ಲಿಂದ ಕಲ್ಲಿದ್ದಲಿಯು ಪರದೇಶಕ್ಕೆ ಹೋಗುತ್ತದೆ; ಇದಲ್ಲದೆ ಇಲ್ಲಿ ಯಂತ್ರಗಳೂ ಹಡಗುಗಳೂ ಆಗುತ್ತವೆ. ಬರ್ವಿಕ್ಕ (ಟ್ವೀಡ ಹೊಳೆಯ ಮೇಲೆ), ಇದು ೧೫೫೧ರಿಂದ ೧೮೩೨ರ ವರೆಗೆ ಸ್ವತಂತ್ರವಾಗಿತ್ತು; ೧೮೩೨ರಿಂದ ಇಂಗ್ಲಂಡಕ್ಕೆ ಸೇರಿರುತ್ತದೆ. ಫ್ಲಾಡೆನ್ನಫೀಲ್ಡ, ಇಲ್ಲಿ ಸ್ಕಾಟಲಂಡದ ೪ನೆಯ ಜೇಮ್ಸನು ಸೋತು ಪ್ರಾಣ ಹೊಂದಿದನು (೧೫೧೩). ಆಟ್ಟರಬರ್ನ, ಇಲ್ಲಿ ೧೩೮೮ರಲ್ಲಿಯಾದ ಕಾಳಗದಲ್ಲಿ ಡಗ್ಲಾಸನು ಮಡಿದನು. ಹೆಗ್ಝಾಮು, ಇದು ನ್ಯೂಕ್ಯಾಸಲ್ಲದ ಪಶ್ಚಿಮಕ್ಕಿರುತ್ತದೆ; ಇಲ್ಲಿ ಯಾರ್ಕ ಮನೆತನದವರು ಲಾಂಕಾಸ್ಟರ ಮನೆತನದವರನ್ನು ಸೋಲಿಸಿದರು (೧೪೬೪).

೨. ಕಂಬರ್ಲಂಡ—ಕಾರ್ಲಾಯಿಲ, (ಏಡನ್ ಹೊಳೆಯ ದಂಡೆಯ ಮೇಲೆ), ಇಲ್ಲಿಯೊಂದು ಗುಡಿಯುಂಟು.

೩. ವೆಸ್ಟಮೋರ್ಲಂಡ—ಅಪ್ಪಲ್ಬಿ, ಇದು ಏಡನ್ನ ಹೊಳೆಯ ದಂಡೆಯ ಮೇಲಲದೆ. ಕೆಂಡಾಲ, ಇಲ್ಲಿ ಉಣ್ಣೆಯ ಕಾರಖಾನೆಗಳಿರುತ್ತವೆ.

೪. ಡರ್ಹ್ಯಾಮ್—ಡರ್ಹ್ಯಾಮ್, (ವೇರಹೊಳೆಯ ಮೇಲೆ), ಇಲ್ಲಿಯೊಂದು ವಿಶ್ವವಿದ್ಯಾಲಯವೂ ಒಂದು ದೇವಾಲಯವೂ ಇರುತ್ತವೆ. ಸಂಡರ್ಲಂಡ, (ವೇರಹೊಳೆಯ ಮುಖದ ಹತ್ತರ), ಇಲ್ಲಿ ಹಡಗುಗಳನ್ನು ಕಟ್ಟುತ್ತಾರೆ; ಮತ್ತು ಕಲ್ಲಿದ್ದಲಿಯ ವ್ಯಾಪಾರವು ಬಹಳವಾಗುತ್ತದೆ. ನೆವ್ಹಿಲ್ಸಕ್ರಾಸ, ಇಲ್ಲಿ ೩ನೆಯ ಎಡ್ವರ್ಡನ ರಾಣಿಯಾದ ಫಿಲಿಪಾ ಎಂಬವಳು ಸ್ಕಾಟಲಂಡದ ೨ನೆಯ ಡೇವ್ಹಿಡನನ್ನು ಸೋಲಿಸಿ ಸೆರೆ ಹಿಡಿದಳು (೧೩೪೬).

೫. ಲಾಂಕಾಸ್ಟರ—ಮ್ಯಾಂಚಸ್ಟರ, (ಮರ್ಸಿ ಹೊಳೆಯ ದಂಡೆಯ ಮೇಲೆ), ಇದು ಇಂಗ್ಲಂಡದಲ್ಲಿ ೩ನೆಯ ದೊಡ್ಡ ಪಟ್ಟಣವು; ಇಲ್ಲಿಯೊಂದು ವಿಶ್ವವಿದ್ಯಾಲಯವೂ ಒಂದು ದೇವಾಲಯವೂ ಇರುತ್ತವೆ; ಇಲ್ಲಿಯೆಲ್ಲತರದ ಕಾರಖಾನೆಗಳವೆ; ಮತ್ತು ಎಲ್ಲ ತರದ ಅರಳೆಯ ವಸ್ತ್ರಗಳಾಗುತ್ತವೆ; ಇಲ್ಲಿ ಹುಟ್ಟುವ ಮ್ಯಾಂಜರ ಪಾಟೆಂಬ ನೂಲಿನ ಬಟ್ಟೆಗಳು ಪ್ರಸಿದ್ಧವುಂಟು; ಇವಲ್ಲದೆ ಇಲ್ಲಿ ಯಂತ್ರಗಳೂ ರತ್ನಗಂಬಳಿಗಳೂ ರೇಶಿಮೆಯ ವಸ್ತ್ರಗಳೂ ಆಗುತ್ತವೆ. ಲಿವ್ಹರ್ಪೂಲವು, ವ್ಯಾಪಾರಜನಸಂಖ್ಯೆಗಳಿಂದ ಎರಡನೆಯ ದೊಡ್ಡ ಪಟ್ಟಣವೂ ಬಂದರದ ಸ್ಥಳವೂ ಇರುತ್ತದೆ; ಇದು ಮರ್ಸಿಹೊಳೆಯ ಮೇಲದೆ; ಇಲ್ಲಿಯ ಜನರು ಆಯರ್ಲಂಡ, ವೇಸ್ಟ ಇಂಡೀಜ, ಅಮೇರಿಕಾ ಮುಂತಾದ ನಾಡುಗಳೊಡನೆ ವ್ಯಾಪಾರ ನಡಿಸುತ್ತಾರೆ; ಇದು ಮ್ಯಾಂಚೆಸ್ಟರದಿಂದ ೩೧ ಮೈಲಿನ ಮೇಲ

ದೆ; ಇಲ್ಲಿಯೊಂದು ದೊಡ್ಡ ದೇವಾಲಯವುಂಟು; ಇಲ್ಲಿಂದ ಬರ್ಕನ್‌ಹೆಡ್ಡಕ್ಕೆ ಮರ್ಸಿಹೊಳೆಯ ಕೆಳಗಿಂದ ಉಗೆಬಂಡಿಯು ಹೋಗುತ್ತದೆ; ಇಲ್ಲಿ ಅರಳೆಯ ವ್ಯಾಪಾರ ಬಹಳವಾಗುತ್ತದೆ. ಪ್ರೆಸ್ಟನ್ನ, (ರಿಬ್ಬಲ್ಲ ಹೊಳೆಯ ಮೇಲೆ), ಬರಿ, ಓಲ್ಡಹ್ಯಾಮ್, ಬರ್ನಲೆ, ಅಸ್ಟನ್, ಬೋಲ್ಟನ್, ಬ್ಲಾಕಬರ್ನ, ಇವು ಅರಳೆಯ ವ್ಯಾಪಾರಕ್ಕಾಗಿ ಹೆಸರಾದ ಪಟ್ಟಣಗಳು. ರಾಚಡೇಲವು ಉಣ್ಣೆಯ ಬಟ್ಟೆಗಳ ಬಗ್ಗೆ ಹೆಸರಾಗಿರುತ್ತದೆ. ಪ್ರೆಸ್ಟನ್, ಇಲ್ಲಿ ಡರ್ವೆಂಟವಾಟರದ ಅರ್ಲನು ಬಂಡುಗಾರರನ್ನು ಸೋಲಿಸಿದನು (೧೭೧೫).

೬. ಯೊರ್ಕ—ಯೊರ್ಕ, ಈ ಪಟ್ಟಣವು ಊಜಹೊಳೆಯ ದಂಡೆಯ ಮೇಲಿರುತ್ತದೆ; ಇದು ಧರ್ಮಗುರುವಿನ ಮುಖ್ಯಸ್ಥಾನವು; ಇಲ್ಲಿಯೊಂದು ಸುಂದರವಾದ ಮಠವಿರುತ್ತದೆ; ಮೊದಲು ಇಲ್ಲಿ ರೋಮದ ಅಧಿಪತಿಗಳಿರುತ್ತಿದ್ದರು; ಇಲ್ಲಿ ಸ್ಟುವರ್ಟ ಮೇರಿಯ ಬಗ್ಗೆ ಒಂದು ಸಭೆಯು ಕೂಡಿತ್ತು. ಸೆಫೀಲ್ಡ, ಇಲ್ಲಿ ಉಕ್ಕು ಕಬ್ಬಿಣಗಳ ಸಾಮಾನುಗಳಾಗುತ್ತವೆ. ಹಲ್, ಇದು ಹಂಬರ ನದಿಯ ದಂಡೆಯಲ್ಲಿದೆ. ಲೀಡ್ಸ, ಬ್ರಾಡ್ಫರ್ಡ, ಹಾಲಿಫಾಕ್ಸ, ಹಡರ್ಸಫೀಲ್ಡ, ಈ ಪಟ್ಟಣಗಳಲ್ಲಿ ಉಣ್ಣೆಯ ಬಟ್ಟೆಗಳಾಗುತ್ತವೆ. ವೇಕಫೀಲ್ಡಗ್ರೀನ, ಇಲ್ಲಿ ೬ನೆಯ ಹೇನ್ರಿಯ ಹೆಂಡತಿಯಾದ ಮಾರ್ಗಾರೆಟ್ಟಳು ಯಾರ್ಕ ಪಕ್ಷದವರನ್ನು ಸೋಲಿಸಿದಳು; ಯಾರ್ಕದ ಡ್ಯೂಕನು ಆಕಾಳಗದಲ್ಲಿ ಮಡಿದನು (೧೪೬೦). ನಾರ್ಥೆಲರ್ಟನ್ನ, ಇಲ್ಲಿ

ಸ್ಟೀಫನ್ನನ ಸರದಾರರು ಮೂಡಳ ಸೋದರಮಾವ ನೂ ಸ್ಕಾಟಲಂಡದ ಅರಸನೂ ಆದ ಡೇವ್ಹಿಡನನ್ನು ಸೋಲಿಸಿದರು (೧೧೩೮). ರೆವ್ಹೆನ್ಸಪುರ, ಇಲ್ಲಿ ಲಾಂಕಾಸ್ಟರದ ಡ್ಯೂಕನು ದಂಡಿನೊಡನೆ ಬಂದು ಇಳಿದನು (೧೩೯೯). ಮೂರ್ಸ್ಟನ್ಮೂರ, ಇಲ್ಲಿ ಕ್ರಾಮವೆಲ್ಲನು ೧೬೪೪ ರಲ್ಲಿ ೧ನೆಯ ಚಾರ್ಲಸನನ್ನು ಸೋಲಿಸಿದನು. ಪಾಂಫ್ರೆಟ್, ಇಲ್ಲಿ ೪ನೆಯ ಹೇನ್ರಿಯು ೨ನೆಯ ರಿಚರ್ಡನನ್ನು ಸೆರೆಯಲ್ಲಿಟ್ಟು ಕೊಲ್ಲಿಸಿದನು (೧೩೯೯). ಸ್ಕಾರ್ಬರ್ಗ, ಇದು ಸ್ನಾನದ ಸ್ಥಳವಾಗಿರುತ್ತದೆ. ಸ್ಟಾಂಫರ್ಡಬ್ರಿಜ್ಜ, ಇಲ್ಲಿ ಹೇರೊಲ್ಡನು ತನ್ನ ತಮ್ಮನನ್ನು ಸೋಲಿಸಿದನು (೧೦೬೬).

## ವೇಲ್ಸಕ್ಕೆ ಹೊಂದಿ.

೭. ಚೆಸ್ಟರ (ಚೆಷಾಯರ)–ಮ್ಯಾಕಲ್ಸಫೀಲ್ಡ, ಇಲ್ಲಿ ರೇಶಿಮೆಯ ಕಾರಖಾನೆಯದೆ. ಸ್ಟಾಕ್‌ಪೋರ್ಟ, (ಮರ್ಸಿಹೊಳೆಯ ದಂಡೆಯ ಮೇಲೆ), ಹೈಡ, ಡಂಕನ್‌ಫೀಲ್ಡ, ಈ ಮೂರು ಊರುಗಳಲ್ಲಿ ಅರಳೆಯ ಕಾರಖಾನೆಗಳುಂಟು. ಚೆಸ್ಟರ, ಇದು ಡೀ ಹೊಳೆಯ ದಂಡೆಯ ಮೇಲದೆ; ಇಲ್ಲಿಯೊಂದು ದೊಡ್ಡ ಗುಡಿಯದೆ. ಬರ್ಕನ್ಹೆಡ್ಡ, (ಮರ್ಸಿ ಹೊಳೆಯ ದಂಡೆಯ ಮೇಲೆ), ಇಲ್ಲಿ ಹಡಗುಗಳನ್ನು ಕಟ್ಟುತ್ತಾರೆ.

೮. ಶ್ರಾಪ (ಸಾಲಪ್ಪ)–ಶ್ರೂಜಬರಿ (ಸೆವ್ಹರ್ನಹೊಳೆಯ ಮೇಲೆ), ಇಲ್ಲಿ ೪ನೆಯ ಹೇನ್ರಿಯು ಹಾಟ್ಸ್ಪರನನ್ನು ಸೋಲಿಸಿದನು; ಹಾಟ್ಸ್ಪರನು ಕಾಳಗದಲ್ಲಿ ಮಡಿ

ದನು (೧೪೦೩). ಆಸ್ವೆಸ್ಟ್ರಿ, ಇಲ್ಲಿ ನಾರ್ಥಂಬ್ರಿಯೆಯ
ಅರಸನಾದ ಆಸ್ವಾಲ್ಡನು ಕೊಲ್ಲಲ್ಪಟ್ಟನು (೬೪೨).

೯. ಹರ್ಫರ್ಡ—ಮೋರ್ಟಿಮರ್ಸಕ್ರಾಸ್ಸ, ಇಲ್ಲಿ ಯಾರ್ಕದ
ಎಡ್ವರ್ಡನು ೬ನೆಯ ಹೇನ್ರಿಯನ್ನು ಸೋಲಿಸಿದ
ನು (೧೪೬೧). ಹರ್ಫರ್ಡ (ವಾಯ ಹೊಳೆಯ
ಮೇಲೆ), ಇಲ್ಲಿಯೊಂದು ಗುಡಿಯಿರುತ್ತದೆ.

೧೦. ಮನ್ಮೌಥ—ಮನ್ಮೌಥ (ವಾಯ ಹೊಳೆಯಮೇಲೆ),
ಇಲ್ಲಿಂದ ತೊಲೆಗಳು ಪರದೇಶಕ್ಕೆ ಹೋಗುತ್ತವೆ;
ಇಲ್ಲಿ ೫ನೆಯ ಹೇನ್ರಿಯು ೧೩೮೮ರಲ್ಲಿ ಹುಟ್ಟಿದನು.
ನ್ಯೂಪೋರ್ಟ, ಇಲ್ಲಿ ಕಬ್ಬಿಣದ ತರತರದ ಮೊಳೆ
ಗಳಾಗುತ್ತವೆ; ಇದರ ನೆರೆಯಲ್ಲಿದ್ದ ಕಿರ್ಲಿಯೋನ
ವು ಮೊದಲು ವೇಲ್ಸದ ರಾಜಧಾನಿಯಾಗಿತ್ತು.

ದಕ್ಷಿಣದಲ್ಲಿ.

೧೧. ಕೆಂಟ—ಕ್ಯಾಂಟರ್ಬರಿ, ಇಲ್ಲಿ ಇಂಗ್ಲಂಡದ ಮುಖ್ಯ
ಧರ್ಮಾಧಿಕಾರಿಯು ಇರುತ್ತಾನೆ; ಇಲ್ಲಿ ೧೧೭೦ರಲ್ಲಿ
ಥಾಮಸ ಅ ಬೆಕೆಟ್ಟನ ಕೊಲೆಯಾಯಿತು. ಡೋ
ವ್ಹರ, ಫಾಲ್ಕಸ್ಟೋನ ಇವೆರಡು ಸ್ಥಳಗಳಲ್ಲಿ
ಯುರೋಪ ಖಂಡದ ಟಪಾಲನ್ನು ಕಟ್ಟುತ್ತಾರೆ.
ಗ್ರೀನ್ವಿಚ್ಚ, ಇಲ್ಲಿಯೊಂದು ವೇಧಶಾಲೆಯೂ ಒಂದು
ಔಷಧಾಲಯವೂ ಇರುತ್ತವೆ; ಈ ಆಸ್ಪತ್ರಿಯಲ್ಲಿ
ಸುಮಾರು ೩೦೦೦ ರೋಗಗ್ರಸ್ತರಾದ ಅಂಬಿಗರಿ
ರುತ್ತಾರೆ. ಡೆಟ್ಫರ್ಡ, ಇಲ್ಲಿ ರೂಸದೇಶದ ಅರ
ಸನಾದ ದೊಡ್ಡ ಪೀಟರನು ಹಡಗುಕಟ್ಟಲಿಕ್ಕೆ
ಕಲಿತನು (೧೭೦೦). ಉಲ್ವಿಚ್ಚ, ಸೀರನೆಸ್ಸ,

ಚೇಥಾಮ್ ಇವು ದೊಡ್ಡ ಬಂದರಗಳು. ಮೇಡ
ಸ್ಟೋನ, (ಮೆಡ್ವೆಹೊಳೆಯ ದಂಡೆಯ ಮೇಲೆ),
ಇಲ್ಲಿ ಹಾಪ್ಪೆಂಬ ವನಸ್ಪತಿಯ ವ್ಯಾಪಾರವು ನಡೆ
ಯುತ್ತದೆ.

೧೨. ಸಸೆಕ್ಸ–ಹೇಸ್ಟಿಂಗ್ಸ, ಇಲ್ಲಿ ನಾರ್ಮಂಡಿಯ ಡ್ಯೂ
ಕನಾದ ಉಯಿಲ್ಯಮ್ಮನು ಹೇರೊಲ್ಡನನ್ನು
ಸೋಲಿಸಿದನು (೧೦೬೬). ಲುಯಿಸ, ಬ್ರಾಯಿಟನ್
ಇವು ಸ್ನಾನದ ಸ್ಥಳಗಳಾಗಿರುತ್ತವೆ; ಲುಯಿಸದಲ್ಲಿ
ಸೈಮಂಡಿ ಮೊಂಟ್ಫೆರ್ಡನು ೩ನೆಯ ಹೇನ್ರಿಯ
ನ್ನು ಸೋಲಿಸಿ ಸೆರೆಹಿಡಿದನು (೧೨೬೪). ಚಿಚೆ
ಸ್ಟರ, ಇಲ್ಲಿ ಕಾಳುದನಗಳ ವ್ಯಾಪಾರವು ಬಹ
ಳವಾಗಿ ನಡೆಯುತ್ತದೆ.

೧೩. ಹ್ಯಾಂಪ (ಹ್ಯಾಂಟ್ಸ)–ವಿಂಚೆಸ್ಟರ (ಇಚ್ಚನ್ನ
ಹೊಳೆಯ ದಂಡೆಯ ಮೇಲೆ), ಇದು ಮೊದಲು
ಇಂಗ್ಲಂಡದ ರಾಜಧಾನಿಯಾಗಿತ್ತು. ನ್ಯೂಪೋ
ರ್ಟ, ಇದು ವ್ಹಾಯಿಟ ನಡುಗಡ್ಡೆಯಲ್ಲಿ ಮುಖ್ಯ
ವೂರು; ಇದರ ಉತ್ತರಕ್ಕಿದ್ದ ಅಸ್ಬೋರ್ನ ಅರ
ಮನೆಯು ರಾಣಿಯವರ ಪ್ರೀತಿಯ ವಾಸಸ್ಥಾ
ನವು. ಕೇರಿಸ್ಬ್ರೂಕ, ಇದು ವ್ಹಾಯಿಟ ನಡುಗ
ಡ್ಡೆಯಲ್ಲಿರುತ್ತದೆ; ಇಲ್ಲಿ ಕ್ರಾಮವೆಲ್ಲನು ೧ನೆಯ
ಚಾರ್ಲಸನನ್ನು ಕಾವಲಿನಲ್ಲಿರಿಸಿದನು; ಮತ್ತು
೧ನೆಯ ಚಾರ್ಲಸನನ್ನು ಗಲ್ಲಿಗೆ ಹಾಕಿದ ಸುದ್ದಿ
ಯನ್ನು ಕೇಳಿ ಅವನ ಮಗಳಾದ ಎಲಿಜಾಬೆಥಳು
ಎದೆಯೊಡಕೊಂಡು ಇಲ್ಲಿಯೇ ಸತ್ತಳು (೧೬೪೯).

ಸೌಥಾವ್ಟನ್ನ (ಇಚ್ಚನ್ನಹೊಳೆಯ ದಂಡೆಯ ಮೇಲೆ), ಇಲ್ಲಿಂದ ಹಿಂದುಸ್ಥಾನ, ಚೀನ, ಅಮೇರಿಕಾ, ಆಫ್ರಿಕಾ ಈ ದೇಶಗಳಿಗೆ ಉಗೆಪಡಗುಗಳು ಹೋಗುತ್ತವೆ. ಪೋರ್ಟ್ಸಮೌಥ, ಇದು ಗ್ರೇಟ ಬ್ರಿಟನ್ನದ ಮುಖ್ಯಬಂದರದ ಸ್ಥಳವಾಗಿರುತ್ತದೆ. ಸ್ಪಿಥಹೆಡ್, ಇಲ್ಲಿ ಬ್ರಿಟಿಶ್ ನಾವಾಡಿಗರು ಬಂಡೆಬ್ಬಿಸಿದರು (೧೭೯೭).

೧೪. ಡಾರ್ಸೆಟ್ಟ–ಮೆಲ್ಕೋಂಬ, ಬೇಕನ್ನನು ೧೫೮೪ ರಲ್ಲಿ ಈವೂರ ಪ್ರತಿನಿಧಿಯಾದನು. ಡಾರ್ಚೆಸ್ಟರ (ಫ್ರೋಮ ಹೊಳೆಯ ಮೇಲೆ), ಇಲ್ಲಿರೋಮಾಯರು ಕಟ್ಟಿಸಿದ ಕೆಲವು ಮುರಕುಕಟ್ಟಣೆಗಳುಂಟು. ವೇಮೌಥ, ಇದು ಸುಂದರವಾದ ಬಂದರದ ಸ್ಥಳವಿರುತ್ತದೆ. ಪೋರ್ಟಲಂಡ, ಇದು ಈಪರಗಣೆಯ ತೆಂಕಣಿಗೆ ಒಂದು ದ್ವೀಪಕಲ್ಪವಿರುತ್ತದೆ; ಇಲ್ಲಿ ಬ್ಲೇಕನು ಡಚ್ಚರ ನೌಕಾಧಿಕಾರಿಯಾದ ಟ್ರಾಂಪನನ್ನು ಸೋಲಿಸಿದನು (೧೬೫೪). ಲಾಯಿಮ, ಇಲ್ಲಿ ಮನ್ಮಾಥದ ಡ್ಯೂಕನು ದಂಡಿನೊಡನೆ ಬಂದಿಳಿದನು (೧೬೮೫).

೧೫. ಡೆವ್ಹನ್ನ–ಹೇಸ, ಇಲ್ಲಿ ವಾಲ್ಟರ ರಾಲೆಯು ೧೫೫೨ ರಲ್ಲಿ ಹುಟ್ಟಿದನು. ಎಕ್ಸೇಟರ (ಎಕ್ಸ ಹೊಳೆಯ ದಂಡೆಯ ಮೇಲೆ), ಇದು ಪೂರ್ವಕಾಲದಲ್ಲಿ ವೆಸೆಕ್ಸದ ರಾಜಧಾನಿಯಾಗಿತ್ತು. ಪ್ಲಿಮೌಥ, ಡೆವ್ಹನ್‌ಪೋರ್ಟ ಇವು ಪೋರ್ಟ್ಸಮೌಥದ ತರುವಾಯ ಮುಖ್ಯ ಬಂದರಗಳು.

೧೬. ಕಾರ್ನವಾಲ—ಬಾಡ್ಮಿನ', ಇಲ್ಲಿ ಮಚ್ಚಿಯ ಜೋಡುಗಳು ಬಹಳವಾಗಿ ಆಗುತ್ತವೆ. ಟ್ರೂರೊ, ಇದು ಈ ಪರಗಣೆಯಲ್ಲಿ ಎಲ್ಲಕ್ಕೂ ದೊಡ್ಡವೂರು; ಇದು ಕಣಿಗಳಿರುವ ಪ್ರದೇಶದ ಮಧ್ಯದಲ್ಲಿದ್ದುದಲ್ಲದೆ, ಇಲ್ಲಿಯೊಂದು ದೊಡ್ಡಗುಡಿಯಿರುತ್ತದೆ. ಫಾಲ್ಮೌಥ, ಇದು ಬಂದರದ ಸ್ಥಳವಿರುತ್ತದೆ; ಮೊದಲು ಇಲ್ಲಿಂದ ಹೊರಡುವ ಟಪಾಲು ಈಗ ಸೌಥಾವ್ಟನ್ನದಿಂದ ಹೋಗುತ್ತದೆ. ಸೆಂಟ ಆಯಿವ್ಸ, ಇಲ್ಲಿ ಮೀನುಹಿಡಿಯುವ ಕೆಲಸವು ಬಹಳವಾಗಿ ಸಾಗುತ್ತದೆ. ಹಾಗ್ಸ್ಟನ, ಇದು ಸಿಸಿಲಿ ನಡುಗಡ್ಡೆಗಳಲ್ಲಿ ಮುಖ್ಯವಾದ ಪಟ್ಟಣವು. ಟಾರ್ಬೆ, ಇಲ್ಲಿಯೇ ಆರೆಂಜದ ಅರಸನಾದ ಉಯಿಲ್ಯಮ್ಮನು ಬಂದಿಳಿದನು (೧೬೮೮).

ಪೂರ್ವದಲ್ಲಿ.

೧೭. ಲಿಂಕನ್—ಲಿಂಕನ್, ಇಲ್ಲಿ ೧೧೪೧ರಲ್ಲಿ ಮಾಡಳ ಕಡೆಯುವರು ಸ್ಟೀಫನ್ನನನ್ನು ಸೋಲಿಸಿ ಸೆರೆಹಿಡಿದರು (೧೧೪೧); ಮತ್ತು ಇಲ್ಲಿಯೇ ೩ನೆಯ ಹೇನ್ರಿಯ ಕಯ್ಕೆಳಗಿನ ಸರದಾರರು ಫ್ರಾನ್ಸದ ಲುಯಿಯನ್ನು ಸೋಲಿಸಿ ಓಡಿಸಿದರು (೧೨೧೭).

೧೮. ನಾರ್ಫಾಕ*—ನಾರ್ವಿಚ್ಚ, ಇಲ್ಲಿ ಶಾಪ್ತಿಯು ಹುಟ್ಟುತ್ತದೆ. ಬರ್ನಹ್ಯಾಮ್‌ಥೋರ್ಪ, ಇಲ್ಲಿ

* ನಾರ್ಫಕ, ಸಫಾಕ ಈ ಎರಡು ಪರಗಣೆಗಳಿಗೆ ಮೊದಲು ಈಸ್ಟಆಂಗ್ಲಿಯಾ ಎನ್ನುತ್ತಿದ್ದರು. ದೊಡ್ಡ ಆಲ್ಫ್ರೆಡ್ಡನು ಕ್ರೈಸ್ತರಾದ ಡೇನರನ್ನು ಈ ಪರಗಣೆಗಳಲ್ಲಿರಗೊಟ್ಟನು.

೧೭೪೮ರಲ್ಲಿ ನೆಲ್ಸನ್ನನು ಹುಟ್ಟಿದನು. ಯೂರ್ಮಾಥ, ಇಲ್ಲಿ ಮೀನುಹಿಡಿಯುವ ಕೆಲಸವು ನಡೆಯುತ್ತದೆ.

೧೯. ಸಫಾಕ—ಇಪ್ಸವಿಚ್ಚ, ಇಲ್ಲಿ ಥಾಮಸ ಊಲ್ಸೆಯು ಹುಟ್ಟಿದನು (೧೪೭೧); ಮತ್ತು ಇಲ್ಲಿ ಸಾಗುವಳಿಯ ಮುಟ್ಟುಗಳಾಗುತ್ತವೆ. ಲೊವೆಸ್ಟಾಪ್ಟ, ಇದು ಇಂಗ್ಲಂಡದ ತೀರ ಮೂಡಣ ಬಿಂದುವದು. ಬರಿಸೆಂಟೆಡ್ಮಂಡ್ಸ, (ಲಾರ್ಕಹೊಳೆಯ ಮೇಲೆ), ಇಲ್ಲಿಯೊಂದು ಹಳದಾದ ಮಠಕುದೇವಾಲಯವಿರುತ್ತದೆ.

೨೦. ಇಸೆಕ್ಸ—ಕೋಲ್ಚೆಸ್ಟರ, ಇದು ಕೋಲನ್ ಹೊಳೆಯ ಮೇಲಿರುತ್ತದೆ; ಮತ್ತು ಮೀನು ಹಿಡಿಯುವದಕ್ಕೆ ಹೆಸರಾಗಿದೆ. ಹಾರ್ವಿಚ್ಚ, ಇಲ್ಲಿ ಹಾಲಂಡಕ್ಕೆ ಹೋಗುವ ಟಪಾಲನ್ನು ಕಟ್ಟುತ್ತಾರೆ.

ಮಧ್ಯದಲ್ಲಿ ಉತ್ತರಕ್ಕೆ.

೨೧. ನಾಟಿಂಗ್ಹಾಮ—ನಾಟಿಂಗ್ಹಾಮ, ಇಲ್ಲಿ ನೂಲಿನ ಕಾಲುಚೀಲಗಳಾಗುತ್ತವೆ; ಈಕೋಟೆಯಲ್ಲಿ ೩ನೆಯ ಎಡ್ವರ್ಡನು ತನ್ನ ತಾಯಿಯಾದ ಇಸಾಬೆಲಾ ಎಂಬವಳನ್ನು ಸಾಯುವ ವರೆಗೆ ಸೆರೆಯಲ್ಲಿಟ್ಟಿದ್ದನು. ನ್ಯೂಯೊರ್ಕ, ಇಲ್ಲಿ ಜಾನ ಅರಸನು ಜ್ವರದಿಂದ ಸತ್ತನು (೧೨೧೬); ಮತ್ತು ಇಲ್ಲಿ ೧ನೆಯ ಚಾರ್ಲಸನು ಸ್ಕಾಟ್ಟರಿಗೆ ಶರಣುಹೋದನು (೧೬೪೬). ಸ್ಟೋಕ, ಇಲ್ಲಿ ೭ನೆಯ ಹೇನ್ರಿಯು ಲಾಂಬರ್ಟಸಿಮನೆಲ್ಲನನ್ನು ಸೋಲಿಸಿ ಸೆರೆ ಹಿಡಿದನು ( ೧೪೮೭ ).

೨೨. ಡರ್ಬಿ—ಡರ್ಬಿ, (ಡರ್ವೆಂಟ ಹೊಳೆಯ ಮೇಲೆ), ಇಲ್ಲಿ ರೇಶಿಮೆಯ ಕಾರಖಾನೆಯದೆ; ಇಲ್ಲಿ ಹುಟ್ಟು ವ ರೇಶಿಮೆಯ ಕಾಲುಚೀಲಗಳು ಪ್ರಸಿದ್ಧವಾ ಗಿವೆ. ಗ್ಲಾಸೊಪ್ಪ, ಇದು ಅರಳೆಯ ಕಾರಖಾ ನೆಯ ಬಗ್ಗೆ ಹೆಸರಾಗಿದೆ.

೨೩. ಸ್ಟ್ಯಾಫರ್ಡ—ಸ್ಟ್ಯಾಫರ್ಡ ( ಅವ್ಹನ್ ಹೊಳೆಯ ಮೇಲೆ ), ಇಲ್ಲಿ ಮಣ್ಣು ಕಾಜುಗಳ ಪಾತ್ರೆಗಳೂ ಕುದುರೆಯ ಜೀನುಗಳೂ ಹುಟ್ಟುತ್ತವೆ. ಉಲ್ವ ರಹ್ಯಾಂಪ್ಟನ್ನ, ಬಿಲ್ಸ್ಟನ್, ವಾಲ್ಸಾಲ ಈ ಪಟ್ಟಣಗಳಲ್ಲಿ ಉಕ್ಕು ಕಬ್ಬಿಣ ಮುಂತಾದ ಧಾತು ಗಳ ಸಾಮಾನುಗಳು ಹುಟ್ಟುತ್ತವೆ. ಲಿಚ್ಛಫೀಲ್ಡ್, ಇಲ್ಲಿ ಸ್ಯಾಮುಯಲ್ ಜಾನಸನ್ನನೆಂಬ ಹೆಸರಾದ ಗ್ರಂಥಕರ್ತನು ಹುಟ್ಟಿದನು (೧೭೦೯). ಬರ್ಟನ್ (ಟ್ರೆಂಟ ಹೊಳೆಯ ಮೇಲೆ), ಇಲ್ಲಿ ಸರಾಯಿಯ ನ್ನು ಮಾಡುತ್ತಾರೆ. ಸ್ಟೋಕ, ಬರ್ಸಲೆಮ್ ಇವು ಗಳಲ್ಲಿ ತರತರದ ಮಣ್ಣಿನ ಪಾತ್ರೆಗಳಾಗುತ್ತವೆ.

೨೪. ಉಸ್ಟರ—ಉಸ್ಟರ (ಸೆವ್ಹರ್ನ ಹೊಳೆಯ ದಂ ಡೆಯಲ್ಲಿ), ಇಲ್ಲಿ ಕ್ರಾಮವೆಲ್ಲನು ೨ನೆಯ ಚಾರ್ಲ ಸನನ್ನು ೧೬೫೧ರಲ್ಲಿ ಸೋಲಿಸಿದನು. ಡಡ್ಲೆ, ಇಲ್ಲಿ ಉಕ್ಕು ಕಬ್ಬಿಣಕಾಜು ಮುಂತಾದ ಧಾತುಗಳ ಸಾಮಾನುಗಳಾಗುತ್ತವೆ. ಕಿಡ್ಡರಮಿನಿಸ್ಟರ, ಇಲ್ಲಿ ಜಮುಖಾನೆ ರತ್ನಗಂಬಳಿಗಳಾಗುತ್ತವೆ. ಇವ್ಹಿ ಶಾಮ್, ಇದು ಉಸ್ಟರದ ಆಗ್ನೇಯಕ್ಕೆ ೧೫ ಮೈಲಿನ ಮೇಲೆ ಇರುತ್ತದೆ; ಇಲ್ಲಿ ಸೈಮಂಡಿ ಫಾಂ

ಟ್ವರ್ಡನು ೩ನೆಯ ಹೇನ್ರಿಯ ಮಗನಾದ ಎಡ್ವ
ರ್ಡನಿಂದ ಸೋತು ಸತ್ತನು (೧೪೬೫).

೧೭ ಲೀಸ್ಟರ–ಲೀಸ್ಟರ, ಇಲ್ಲಿ ರೇಶಿಮೆಯ ಕಾಲುಚೀ
ಲಗಳಾಗುತ್ತವೆ; ಇಲ್ಲಿಯೇ ಥಾಮಸ್ ಊಲ್ಸೆಯು
೧೫೩೦ ರಲ್ಲಿ ಮರಣಹೊಂದಿದನು. ಬಾಸ್ವರ್ಥ,
ಇಲ್ಲಿ ಟ್ಯೂಡರ ಮನೆತನದವನೂ ರಿಚ್ಮಂಡದ
ಅರ್ಲನೂ ಆದ ಹೇನ್ರಿಯು ೩ನೆಯ ರಿಚರ್ಡನ
ನ್ನು ಸೋಲಿಸಿದನು ( ೧೪೮೫ ).

೨೬. ರಟ್ಲಂಡ–ಓಖ್ಯಾಮ್, ಇದು ಈ ಪರಗಣೆಯ
ಮುಖ್ಯ ಪಟ್ಟಣವು.

೨೭. ವಾರ್ವಿಕ್ಕ–ವಾರ್ವಿಕ್ಕ, ಇಲ್ಲಿಯೊಂದು ಹಳದಾದ
ಕೋಟೆಯಿರುತ್ತದೆ. ಬರ್ಮಿಂಗ್ಹ್ಯಾಮ, (ರೀ
ಹೊಳೆಯ ಮೇಲೆ), ಇಲ್ಲಿ ಕಾಜಿನಪಾತ್ರೆಗಳೂ
ಬೆಳ್ಳಿಯ ತರತರದ ಒಡವೆಗಳೂ ಹುಟ್ಟುತ್ತವೆ;
ಇದು ಇಂಗ್ಲಂಡದಲ್ಲಿ ನಾಲ್ಕನೆಯ ದೊಡ್ಡ ಪಟ್ಟ
ಣವು; ಇಲ್ಲಿ ತೀರ ಸಣ್ಣದಾದ ಸೂಜಿ ಮೊದಲ್ಗೊಂ
ಡು ಅತಿ ದೊಡ್ಡ ಉಗೆಯಂತ್ರಗಳ ವರೆಗೆ ಸಾಮಾ
ನುಗಳು ಹುಟ್ಟುತ್ತವೆ; ಚಾಕು, ಕತ್ತರಿ, ಟಾಕು,
ಸೂಜಿಯಮೊಳೆ ತುಬಾಕಿ ಮುಂತಾದವುಗಳನ್ನು
ಇಲ್ಲಿ ಮಾಡುತ್ತಾರೆ. ಕಾವೆಂಟ್ರಿ, ಇಲ್ಲಿ ರೇಶಿ
ಮೆಯ ಲಾಡಿಗಳೂ ಗಡಿಯಾಲಗಳೂ ಆಗುತ್ತವೆ;
ಇಲ್ಲಿಯೇ ಸ್ಟುವರ್ಟ ಮೇರಿಯನ್ನು ಎಲಿಜಾಬೆ
ಥಳು ೮।೧೦ ವರುಷಗಳ ವರೆಗೆ ಸೆರೆಯಲ್ಲಿಟ್ಟಿದ್ದ
ಳು. ಸ್ಟ್ರ್ಯಾಟ್ಫರ್ಡ (ಅವ್ಹನ್ ಹೊಳೆಯ ಮೇಲೆ),

ಇಲ್ಲಿ ಸೇಕ್ಸಪಿಯರನೆಂಬ ಹೆಸರಾದ ಕವಿಯು ಹುಟ್ಟಿದನು (೧೫೬೪). ವೆಡ್ನೆಸ್ಬರಿ, ಇಲ್ಲಿ ಉಕ್ಕು ಕಬ್ಬಿಣಗಳ ಸಾಮಾನುಗಳಾಗುತ್ತವೆ. ರಗ್ಬಿ, ಇಲ್ಲಿಯು ಸಾಲೆಯು ಹೆಸರಾದುದು. ಲಿವಿಂಗ್ಟನ್, ಇಲ್ಲಿಯ ನೀರು ಬಹಳ ಆರೋಗ್ಯಕರವು. ಎಜ್ಜ ಹಿಲ್ಲ, ಇಲ್ಲಿ ಒಳಜಗಳದ ಮೊದಲನೆಯ ಕಾಳಗವಾಯಿತು; ಅದರಲ್ಲಿಯಾರಿಗೂ ಜಯವಾಗಲಿಲ್ಲ.

೨೮, ನಾರ್ಥರ್ಾವ್ಟನ್ನ—ನಾರ್ಥರ್ಾವ್ಟನ್ನ (ನೆನ್ನಹೊಳೆಯಮೇಲೆ), ಇಲ್ಲಿ ಬೂಟುಗಳಾಗುತ್ತವೆ. ನೇಸ್ಬಿ, ಇಲ್ಲಿ ಕ್ರಾಮವೆಲ್ಲನು ಮೊದಲನೆಯ ಚಾರ್ಲಸನನ್ನು ೧೬೪೫ರಲ್ಲಿ ಸೋಲಿಸಿದನು. ಫಾಥರಿಂಗೆ, ಇಲ್ಲಿ ಎಲಿಜಾಭೆಥ ರಾಣಿಯು ಸ್ಕಾಟಲಂಡದ ಮೇರಿಯನ್ನು ಗಲ್ಲಿಗೆ ಹಾಕಿಸಿದಳು (೧೫೮೭).

೨೯. ಹಂಟಿಗ್ಡನ್ನ—ಹಂಟಿಗ್ಡನ್ನ (ದೊಡ್ಡವೂಜಹೊಳೆಯ ಮೇಲೆ), ಇಲ್ಲಿ ಕ್ರಾಮವೆಲ್ಲನು ೧೫೯೯ ರಲ್ಲಿ ಹುಟ್ಟಿದನು.

೩೦. ಕೇಂಬ್ರಿಜ್ಜ—ಕೇಂಬ್ರಿಜ್ಜ, (ದೊಡ್ಡವೂಜ ಹೊಳೆಯ ಮೇಲೆ), ಇಲ್ಲಿಯೊಂದು ವಿಶ್ವವಿದ್ಯಾಲಯವದೆ. ಇಲಾಯ, ಇಲ್ಲಿಯೊಂದು ದೇವಾಲಯವದೆ. ನ್ಯೂವಮಾರ್ಕೆಟ್, ಈ ಊರಿಗೆ ಶರ್ಯತಿಗೋಸ್ಕರ ಹೋದ ೨ನೆಯ ಚಾರ್ಲಸನನ್ನು ತಿರುಗಿ ಬರುವಾಗ ಹಾದಿಯಲ್ಲಿ ಕೊಲ್ಲುವ ಉದ್ದೇಶದಿಂದ ರಾಯಿಹೌಸದ ಒಳಸಂಚಾಯಿತು (೧೬೮೩).

೩೧. ಗ್ಲೌಸ್ಟರ—ಗೌಸ್ಟರ (ಸೆವ್ಹರ್ನ ಹೊಳೆಯ ದಂಡೆಯ ಮೇಲೆ), ಇಲ್ಲಿಯೊಂದು ದೇವಾಲಯವಿರುತ್ತದೆ. ಬ್ರಿಸ್ಟಲ್', ಇದು ಇಂಗ್ಲಂಡದಲ್ಲಿ ೪ನೆಯ ಬಂದರವು; ಇಲ್ಲಿ ಸಕ್ಕರೆಯನ್ನೂ ಹಿತ್ತಾಳಿಯ ಪಾತ್ರೆಗಳನ್ನೂ ಮಾಡುತ್ತಾರೆ. ಚಲ್ಟನ್ಹ್ಯಾಮ್ ಇಲ್ಲಿ ಆರೋಗ್ಯಕರವಾದ ನೀರಿನ ಬುಗ್ಗೆಗಳವೆ. ಟ್ಯೂಕ್ಸಬರಿ, ಇಲ್ಲಿ ೪ನೆಯ ಎಡ್ವರ್ಡನು ಮಾರ್ಗಾರೆಟ್ಟ ರಾಣಿಯನ್ನು ಸೋಲಿಸಿ ಅವಳನ್ನೂ ಅವಳ ಮಗನನ್ನೂ ಸೆರೆಹಿಡಿದನು (೧೪೭೧). ಬರ್ಕಲೆ, ಇಲ್ಲಿ ೨ನೆಯ ಎಡ್ವರ್ಡನು ೧೩೨೭ರಲ್ಲಿ ಕೊಲ್ಲಲ್ಪಟ್ಟನು. ಸ್ಟ್ರೌಡ, ಇಲ್ಲಿ ಶಕಲಾತಿಗಳಾಗುತ್ತವೆ.

೩೨. ಆಕ್ಸಫರ್ಡ—ಆಕ್ಸಫರ್ಡ (ಟೇಮ್ಸ ಹೊಳೆಯ ದಂಡೆಯ ಮೇಲೆ), ಇಲ್ಲಿಯೊಂದು ಹೆಸರಾದ ವಿದ್ಯಾಲಯವದೆ. ಇಲ್ಲಿ ಬಟ್ಟು ೧೯ ವಿದ್ಯಾಲಯಗಳಿರುತ್ತವೆ.

೩೩. ಬಕಿಂಗ್ಹ್ಯಾಮ್—ಆಯಲ್ಸಬರಿ, ಇದು ಕಾಳಿನ ಉಗ್ರಾಣವಿರುತ್ತದೆ. ಏಟನ್ನ (ಟೇಮ್ಸ ಹೊಳೆಯ ಮೇಲೆ), ಇಲ್ಲಿಯ ಸಾಲೆಯು ಹೆಸರಾದದ್ದು.

೩೪. ಬೆಡ್ಫರ್ಡ—ಬೆಡ್ಫರ್ಡ (ಗ್ರೇಟವೂಜಹೊಳೆಯ ದಂಡೆಯಲ್ಲಿ), ಇದು ಜಾನ ಬನಿಯನ್ನನೆಂಬ ಹೆಸರಾದ ಗ್ರಂಥಕಾರನ ಜನ್ಮಭೂಮಿಯು. ಡನ್ನಸ್ಟೇಬಲ್, ಇಲ್ಲಿ ಹುಲ್ಲುಹೆಣೆದು ತರತರದ ಸಾಮಾನುಗಳನ್ನು ಮಾಡುತ್ತಾರೆ.

೩೫. ಹರ್ಟಫರ್ಡ—ಸೆಂಟಾಲ್ಬನ್ಸ (ಕೋಲನ' ಹೊಳೆಯ ಮೇಲೆ), ಇಲ್ಲಿ ಯಾರ್ಕಮನೆತನದವರು ಲಾಂಕಾಸ್ಟರ ಮನೆತನದ ೬ನೆಯ ಹೇನ್ರಿಯನ್ನು ಸೋಲಿಸಿ ಸೆರೆಹಿಡಿದರು (೧೪೫೫); ಮತ್ತು ೬ನೆಯ ಹೇನ್ರಿಯ ಹೆಂಡತಿಯಾದ ಮಾರ್ಗಾರೆಟ್ಟಳು ವಾರ್ವಿಕ್ಕದ ಅರ್ಲನನ್ನು ಸೋಲಿಸಿದಳು (೧೪೬೧). ಬಾರ್ನೆಟ್ಟ, ಇಲ್ಲಿ ಯಾರ್ಕದ ಡ್ಯೂಕನಾದ ಎಡ್ವರ್ಡನು ಲಾಂಕಾಸ್ಟರಮನೆತನದ ಪಕ್ಷದವನಾದ ವಾರ್ವಿಕ್ಕದ ಅರ್ಲನನ್ನು ಸೋಲಿಸಿ ಕೊಂದನು (೧೪೭೧). ರಾಯಹೌಸ, ಇದು ಲಂಡನ್ನದ ಬಡಗಣಿಗೆ ೧೬ ಮೈಲಿನ ಮೇಲೆ ಇರುತ್ತದೆ; ಇಲ್ಲಿ ನ್ಯೂಮಾರ್ಕೆಟ್ಟನಿಂದ ತಿರುಗಿ ಬರುವಾಗ ೨ನೆಯ ಚಾರ್ಲಸನನ್ನು ಕೊಲ್ಲಬೇಕೆಂತಲೂ ಅವನ ಸೂಳೆಯ ಮಗನಾದ ಮನ್ಮೌಥದ ಡ್ಯೂಕನನ್ನು ಇಂಗ್ಲಂಡದ ಪಟ್ಟದ ಮೇಲೆ ಕೂಡ್ರಿಸಬೇಕೆಂತಲೂ ಒಂದು ಒಳಸಂಚಾಯಿತು (೧೬೮೩).

೩೬. ಮಿಡ್ಲಸೆಕ್ಸ—ಲಂಡನ್ನ, ಇದು ಬ್ರಿಟಿಶ ರಾಜ್ಯದ ರಾಜಧಾನಿಯು; ಭೂಮಿಯ ಮೇಲಿನ ಅವತ್ತೂ ಪಟ್ಟಣಗಳಲ್ಲಿ ದೊಡ್ಡದು; ಇದು ಟೇಮ್ಸ ಹೊಳೆಯ ಎರಡೂ ದಂಡೆಯ ಮೇಲೆ ಹಬ್ಬಿರುತ್ತದೆ; ಇಲ್ಲಿ ಎಲ್ಲ ತರದ ಉದ್ಯೋಗಗಳು ನಡೆಯುತ್ತವೆ; ಮತ್ತು ನಾನಾಪ್ರಕಾರದ ಯಂತ್ರಗಳು ಆಗುತ್ತವೆ; ಇದು ಸಿರಿಭಿಜ್ಜುಜ್ಜುಗಗಳ ಸಂಬಂಧದಿಂದ ಭೂಮಿಯ ಮೇಲಿನ ನಗರಗ

ಳಲ್ಲಿ ಮೇಲಾದದ್ದು; ಇದರ ಜನಸಂಖ್ಯೆಯು*
೪೭,೬೬,೬೬,೧ ಅಂದರೆ ಕುಲಾಬೆಯ ಹೊರತು ಇ
ಡಿ ದಕ್ಷಿಣಭಾಗದ ಜನಸಂಖ್ಯೆಯಷ್ಟು; ಸುಮಾರು
ಆರು ಮುಂಬಯಿಗಳು ಕೂಡಿ ಈನಗರವಾಗಿರುತ್ತ
ದೆಂದರೂ ಅಡ್ಡಿಯಿಲ್ಲ; ೧೮೯೧ನೆಯ ದಶಂಬರದಲ್ಲಿ
ಆದ ಖಾನೆಸುಮಾರಿಯಿಂದ ೧೧,೮೬,೦೦೦ ಜನರು
೨೪ ತಾಸುಗಳಲ್ಲಿ ಈ ಪಟ್ಟಣಕ್ಕೆ ಬರುತ್ತಾರೆಂದು
ತಿಳಿಯುತ್ತದೆ; ಅಥವಾ ವ್ಹಿಯಾನಾ ಇಲ್ಲವೆ ಬರ್ಲಿ

---

* ಪೃಥ್ವಿಯಲ್ಲಿ ಬಹಳ ಜನಸಂಖ್ಯೆಯುಳ್ಳ ಊರುಗಳನ್ನು ಕೆಳಗೆ ಕೊಡುತ್ತೇವೆ:—

| | |
|---|---|
| ೧ ಲಂಡನ್ನ | ೪೭,೬೬,೬೬೧ |
| ೨ ಪಾರೀಸ | ೨೨,೬೯,೦೦೦ |
| ೩ ಕಂತಾನ | ೧೫,೦೦,೦೦೦ |
| ೪ ಲುಚೂ (ಜಪಾನ) | ೧೫,೦೦,೦೦೦ |
| ೫ ಪೇಕಿನ್ನ | ೧೩,೦೦,೦೦೦ |
| ೬ ನ್ಯೂಯಾರ್ಕ | ೧೨,೦೦,೦೦೦ |
| ೭ ಬರ್ಲಿನ್ನ | ೧೧,೨೨,೦೦೦ |
| ೮ ವ್ಹಿಯಾನಾ | ೧೧,೦೦,೦೦೦ |
| ೯ ಸೆಂಟಪೀಟರ್ಸಬರ್ಗ | ೮,೭೬,೦೦೦ |
| ೧೦ ಕಲಕತ್ತಾ | ೮,೩೧,೦೦೦ |
| ೧೧ ಫಿಲಾಡೆಲ್ಫಿಯಾ | ೮,೪೩,೦೦೦ |
| ೧೨ ಟೋಕಿಯೋ (ಅಮೇರಿಕಾ) | ೮,೨೩,೦೦೦ |
| ೧೩ ಮುಂಬಯಿ | ೮,೨೧,೭೬೪ (೧೮೯೧ ರಲ್ಲಿ) |
| ೧೪ ಮೋಸ್ಕೋ | ೭,೫೦,೦೦೦ |
| ೧೫ ಗ್ಲಾಸಗೋ | ೬,೭೪,೦೦೦ |
| ೧೬ ಕಾನಸ್ಟಂಟಿನೋಪಲ್ | ೬,೦೦,೦೦೦ |

ನ್ನ ಪಟ್ಟಣಗಳ ನಿವಾಸಿಗಳಷ್ಟು ಜನರು ದಿನಾಲು
ಲಂಡನ್ನಕ್ಕೆ ಬರುತ್ತಾರೆಂದರೂ ಅನ್ನಬಹುದು;
ಇಲ್ಲಿ ದೊಡ್ಡ ದೊಡ್ಡ ಮನೆಗಳ ಒಡೆಯರು ೧೦ಂಕ್ಕೆ
೫ರಂತೆ ಬೆಂಕಿಕಾಪಿನ ಕೊಟಿಗಳಲ್ಲಿಟ್ಟ ಹಣವು
೮೦,೦೦,೦೦,೦೦೦ ಪೌಂಡು ಇರುತ್ತದೆ; ಆದುದ
ರಿಂದ ಈ ನಗರಕ್ಕೆ ಜನಸಂಖ್ಯೆಯ ಸಂಬಂಧದಿಂದ
ಜನಸಾಗರವೆಂತಲೂ ವೈಭವದ ಸಂಬಂಧದಿಂದ
ಭೂಸ್ವರ್ಗವೆಂತಲೂ ಸಂಪತ್ತಿಯ ಸಂಬಂಧದಿಂದ
ಅಲಕಾಪುರಿಯಂತಲೂ ಹೆಸರಿಟ್ಟರೆ ಅತಿಶಯೋಕ್ತಿ
ಯಾಗದು; ಇದರ ಕ್ಷೇತ್ರಫಲವು ೧೧೮ ಚ
ಚ್ಚೌಕು ಮೈಲು; ಈ ಪಟ್ಟಣವು ೧೪ ಮೈಲು
ಉದ್ದ ೧೦ ಮೈಲು ಅಗಲವಿರುತ್ತದೆ; ಪ್ರಜಾಸ
ಭೆಯ ಸಭಿಕರನ್ನು ಆರಿಸುವ ಸಂಬಂಧದಿಂದ
ಇದರಲ್ಲಿ ೫೯ ಭಾಗಗಳನ್ನು ಮಾಡಿರುತ್ತಾರೆ;
ಇಲ್ಲಿಯೊಂದು ವಿಶ್ವವಿದ್ಯಾಲಯವುಂಟು; ಇಲ್ಲಿ
ಯೇ ವಿಕ್ಟೋರಿಯಾ ಮಹಾರಾಣಿಯವರಿರುತ್ತಾರೆ;
ಇಲ್ಲಿಯೊಂದು ಪ್ರಜಾಸಭೆಯೂ ಸರದಾರರ ಸಭೆ
ಯೂ ವಿಚಿತ್ರವಸ್ತುಸಂಗ್ರಹಾಲಯವೂ ಸೆಂಟಪಾಲ
ಸೆಂಟಪೀಟರ (ವೆಸ್ಟಮಿನಿಸ್ಟರ)* ಗುಡಿಗಳೂ
ಬಕಿಂಗ್ಹ್ಯಾಮ್ ಅರಮನೆಯೂ ಇರುತ್ತವೆ; ಥಾ
ಮಸ ಅ ಬೆಕೆಟ್ಟನು ಇಲ್ಲೇ ಹುಟ್ಟಿದನು. ಚಲ್ಸಿ
ಯೂ (ಟೇಮ್ಸ ನದಿಯ ದಂಡೆಯ ಮೇಲೆ), ಇಲ್ಲಿ

---

* ಈ ಗುಡಿಯಲ್ಲಿ ಇಂಗ್ಲಂಡದ ಎಷ್ಟೋ ಅರಸರ ಹೆಣಗಳು ಹೂ
ಳಲ್ಪಟ್ಟಿರುತ್ತವೆ.

ಯೊಂದು ಆಸಪತ್ರಿಯದೆ; ಇದು ಮೊದಲು ಅರಮನೆ
ಯಾಗಿತ್ತು; ಆದರೆ ಈಗ ಅದರಲ್ಲಿ ಪಡಗುಪಡೆಯ
ರೋಗಗ್ರಸ್ತರಾದ ದಂಡಾಳುಗಳು ಇರುತ್ತಾರೆ.
ಸ್ಪಿಟಾಫೀಲ್ಡ್ಸ, ಇದು ಲಂಡನ್ನದ ಪೂರ್ವಕ್ಕೆ ಅದೆ;
ಇಲ್ಲಿ ರೇಶಿಮೆಯ ಕಾರಖಾನೆಯದೆ. ಸ್ಮಿಥ್‌ಫೀಲ್ಡ್
ಇದು ಲಂಡನ್ನದ ಮಧ್ಯದಲ್ಲಿರುತ್ತದೆ; ಇಲ್ಲಿ ವಾಲೀ
ಸನನ್ನು ೧೩೦೫ರಲ್ಲಿ ಗಲ್ಲಿಗೆ ಹಾಕಿದರು; ಇಲ್ಲಿ
ಯೇ ಎರಡನೆಯ ರಿಚರ್ಡನು ಬಂಡುಗಾರರ
ಮುಖ್ಯಸ್ಥನಾದ ವಾಟ್‌ಟೈಲರನನ್ನು ಕಂಡನು.
ಟೈಬರ್ನ, ಈಸ್ಥಳವು ಆಕ್ಸಫರ್ಡ ಬೀದಿಯ
ಕೊನೆಯಲ್ಲಿರುತ್ತದೆ; ಇಲ್ಲಿ ಇಸಾಬೆಲಾ ರಾಣಿಯ
ಸೆಂಟನಾದ ಮಾರ್ಟಿಮರನನ್ನು ೩ನೆಯ ಎಡ್ವ
ರ್ಡನು ಕೊಲ್ಲಿಸಿದನು (೧೩೩೦). ಕ್ಯೂ, ಇಲ್ಲಿ
ಸುಂದರವಾದ ಉದ್ಯಾನಗಳಿರುತ್ತವೆ. ಹ್ಯಾಂಪ್ಟನ್
ಕೋರ್ಟ, ಇಲ್ಲಿ ಊಲ್ಸೆಯ ಅರಮನೆಯಿರುತ್ತ
ದೆ; ಇಲ್ಲಿ ಸೆರೆಯಲ್ಲಿಡಲ್ಪಟ್ಟ ೧ನೆಯ ಚಾರ್ಲಸನು
ತಪ್ಪಿಸಿಕೊಂಡು ಹೋದನು. ಚೆರ್ಟಸಿ ಇಲ್ಲಿಯೇ
ಜೂಲಿಯಸ್ ಸೀಝರನು ಟೇಮ್ಸ ಹೊಳೆಯನ್ನು
ದಾಟಿದನು. ರನ್ನಿಮೇಡ, ಇಲ್ಲಿ ಜಾನನು ದೊಡ್ಡ
ಸನದಿಗೆ ರುಜುಮಾಡಿದನು (೧೨೧೫). ಎಪ್ಸಮ್,
ಇಲ್ಲಿ ಪ್ರತಿವರ್ಷ ಕುದುರೆಯ ಶರ್ಯತ್ತುಗಳಾಗು
ತ್ತವೆ. ಸೈಡನ್ಹ್ಯಾಮ್, ಇಲ್ಲಿಯೊಂದು ಕಾಜಿ
ನರಮನೆಯಿರುತ್ತದೆ. ಕೆನ್ಸಿಂಗ್ಟನ್, ಇಲ್ಲಿದ್ದ ಅರ
ಮನೆಯಲ್ಲಿ ವಿಕ್ಟೋರಿಯಾ ಮಹಾರಾಣಿಯವರು
ಹುಟ್ಟಿದರು (೧೮೧೯).

೩೭. ಸರ್ರೆ—ಮೊರ್ಟ್‌ಲೇಕ್, ಇಲ್ಲಿ ನೆಲ್ಸನ್ನನು ಒಂದು ಮನೆಯನ್ನೂ ಕೆಲವು ಹೊಲಗಳನ್ನೂ ಕೊಕ್ಕೊಂಡು ಹ್ಯಾಮಿಲ್ಟನ್ ದೊರೆ, ಅವನ ಹೆಂಡತಿ ಇವರೊಡನೆ ಇದ್ದನು. ಗಿಲ್ಡ್‌ಫರ್ಡ್, ಇಲ್ಲಿ ರೋಮಾಯರು ಕಟ್ಟಿಸಿದ ಒಂದು ಮುರಕು ಕೋಟೆ ಇರುತ್ತದೆ.

೩೮. ಬರ್ಕ್ಷರ್—ಉಯಿಂಡ್ಸರ (ಟೇಮ್ಸ್ ಹೊಳೆಯ ಮೇಲೆ), ಇಲ್ಲಿ ರಾಣಿಯವರ ಅರಮನೆಯೂ ಒಂದು ಕೋಟೆಯೂ ಇರುತ್ತವೆ. ನ್ಯೂಬರಿ, ಇಲ್ಲಿ ಪ್ರಜಾಸಭೆಯ ಸರದಾರನಾದ ಇಸೆಕ್ಸದ ಅರ್ಲನು ೧ನೆಯ ಚಾರ್ಲಸನನ್ನು ಸೋಲಿಸಿದನು (೧೬೪೩); ಮರುವರುಷ ಇಲ್ಲಿಯೇ ಆದ ಕಾಳಗದಲ್ಲಿ ಯಾರಿಗೂ ಗೆಲವು ಬರಲಿಲ್ಲ. ವಾಂಟೇಜ, ಇಲ್ಲಿ ದೊಡ್ಡ ಅಲ್ಫ್ರೆಡ್ಡನು ೮೪೯ರಲ್ಲಿ ಹುಟ್ಟಿದನು. ರೀಡಿಂಗ (ಕೆನೆಟ್ಟ ಹೊಳೆಯ ದಂಡೆಯ ಮೇಲೆ), ಇಲ್ಲಿ ಬಿಸ್ಕೂಟುಗಳನ್ನು ಮಾಡುತ್ತಾರೆ; ಇಲ್ಲಿಯೇ ಮುಖ್ಯ ಧರ್ಮಾಧಿಕಾರಿಯಾದ ಲಾಡನು ಹುಟ್ಟಿದನು (೧೫೭೩.)

೩೯. ಉಯಿಲ್ಟ್ಸ—ಸಾಲಿಸ್ಬರಿ (ಅವ್ಹನ್ ಹೊಳೆಯ ದಂಡೆಯಲ್ಲಿ), ಇದರ ನೆರೆಯಲ್ಲಿದ್ದ ಕ್ಲಾರೆಂಡನ'ಮನೆಯೆಂಬಲ್ಲಿ ೨ನೆಯ ಹೇನ್ರಿಯ ಕಾಲಕ್ಕೆ ಕ್ಲಾರೆಂಡನ್ನದ ಕಟ್ಟಳೆಗಳಾದವು. ಬ್ರಿಜ್ಜ, ಇಲ್ಲಿ ಉಣ್ಣೆಯ ಬಟ್ಟೆಗಳಾಗುತ್ತವೆ. ಮಾರ್ಲಬರೋ, ಇಲ್ಲಿ ಹೆಸರಾದ ವಿದ್ಯಾಲಯುವದೆ. ಎಥೆಂಡೂನ, ಇಲ್ಲಿ ದೊಡ್ಡ

ಅಲ್ಫ್ರೆಡ್ಡನು ಡೇನ್ಸರನ್ನು ಸೋಲಿಸಿದನು (೮೭೮). ಸ್ಟೋನಹೆಂಜೆ, ಇಲ್ಲಿ ಡ್ರುಯಿಡರು ಕಟ್ಟಿಸಿದ ಬುನಾದಿಯ ಗುಡಿಯಿರುತ್ತದೆ.

೪೦. ಸಮ್ಮರಸೆಟ್ಟ—ಬಾಥ (ಕೆಳಗಿನ ಅವ್ಹನ್ನದ ಮೇಲೆ), ಇಲ್ಲಿ ಬಿಸಿನೀರಿನ ಬುಗ್ಗಿಗಳವೆ. ಟಾಂಟನ್, ಪ್ರಾನ್ಸಿಸಬೇಕನ್ನನು ೧೫೮೬ ನೆಯ ವರುಷ ಇಲ್ಲಿಯ ಪ್ರತಿನಿಧಿಯಾದನು; ಇಲ್ಲಿಯೇ ಕರ್ನಲ್ ಕಿರ್ಕಿಯು ಮನ್ಮಾಥದ ಡ್ಯೂಕನ ಸಂಗಡಿಗರನ್ನು ಗಲ್ಲಿಗೆಹಾಕಿಸಿದನು (೧೬೮೫). ಸೆಜ್ಜಮೂರ ಇಲ್ಲಿ ಮನ್ಮಾಥನು ೧೬೮೫ ರಲ್ಲಿ ಸೋತನು. ಅಥಲ್ನೆ, ಇಲ್ಲಿ ದೊಡ್ಡ ಅಲ್ಫ್ರೆಡ್ಡನು ಡೇನರ ಉಪದ್ರವ ತಾಳಲಾರದೆ ಒಬ್ಬ ಕುರುಬನ ಮನೆಯಲ್ಲಿ ಉಳಿದನು.

ವೇಲ್ಸದ ಪರಗಣೆಗಳು.

೧. ಫ್ಲಿಂಟ—ವೋಲ್ಡ್, ಇಲ್ಲಿ ಸೀಸುಕಬ್ಬಿಣಗಳ ಕಣಿಗಳವೆ. ಸೆಂಟಸಫ, ಇಲ್ಲಿ ೧೫ನೆಯ ಶತಕದೊಂದು ಗುಡಿಯಿರುತ್ತದೆ.

೨. ಡೆನ್ಬಾಯ್—ರೆಕ್ಸಾಮ್, ಇಲ್ಲಿ ಪ್ಲಾನೆಲ್ಲದ ಬಟ್ಟೆಗಳಾಗುತ್ತವೆ.

೩. ಕಾರ್ನಾರ್ವನ್ನ—ಕಾರ್ನಾರ್ವನ್ನ, ಇಲ್ಲಿ ೨ನೆಯ ಎಡ್ವರ್ಡನು ೧೨೮೪ರಲ್ಲಿ ಪುಟ್ಟಿದನು; ಈ ಕೋಟೆಯನ್ನು ೧ನೆಯ ಎಡ್ವರ್ಡನು ಕಟ್ಟಿಸಿದನು. ಬೆಂಗೂರ, ಇಲ್ಲಿಯೊಂದು ಪಳೆಯ ಗುಡಿಯಿರುತ್ತದೆ. ಲಾಂಡುಡ್ನೊ, ಇದು ಸಮುದ್ರಸ್ನಾನಕ್ಕೆ ಯೋಗ್ಯವಾದ ಸ್ಥಳವು.

೪. ಆಂಗಲ್ಸಿ–ಭೂಮರೀಜ, ಇಲ್ಲಿ ೧ನೆಯ ಎಡ್ವರ್ಡನು ಕಟ್ಟಿಸಿದ ಕೋಟೆಗಳಿರುತ್ತವೆ. ಹೋಲಿಹೆಡ್ಡ, ಇಲ್ಲಿ ಡಬ್ಲಿನ್ನದ ಟಪಾಲು ಕಟ್ಟುತ್ತಾರೆ.

೫. ಮೇರಿಯೊನೆಥ–ಬಾಲಾ, ಇಲ್ಲಿ ಕಾಲ್ಚೀಲಗಳೂ ಕಯ್ಚೀಲಗಳೂ ಆಗುತ್ತವೆ. ಫೆಸ್ಟಿನಿಯೋಗ, ಇಲ್ಲಿ ಪಾಟಿಯ ಕಲ್ಲುಗಳು ಸಿಗುತ್ತವೆ. ಡಾಲ್ಗೇಲಿ, ಇಲ್ಲಿ ಚಿನ್ನದ ಕಣಿಗಳಿರುತ್ತವೆ.

೬. ಮೊಂಟಗಾಮರಿ–ವೆಲ್ಸಪೂಲ, ಇಲ್ಲಿ ಪ್ಲಾನೆಲ್ಲು ಮ ಟ್ಟುತ್ತದೆ.

೭. ರೆಡ್ನಾರ–ಪ್ರೆಸ್ಟಿಗನ್, ಇದು ಪರಘರ್ಜ ಪರಗಣೆಯ ಮೇರೆಯಲ್ಲಿರುತ್ತದೆ, ಮತ್ತು ಇಲ್ಲಿಯೊಂದು ಸಣ್ಣ ಅರಮನೆಯುಂಟು. ಕಿಂಗಟನ್, ಇಲ್ಲಿ ಇಂಗ್ಲಂಡ ವೇಲ್ಸದೇಶಗಳ ನಡುವೆ ಪೂರ್ವಕಾಲದಲ್ಲಿ ಕಟ್ಟಿದ ಗೋಡೆಯ ಕುರುಹುಗಳಿರುತ್ತವೆ.

೮. ಕಾರ್ಡಿಗನ್–ಲಾಂಪೀಟರ, ಇಲ್ಲಿಯೊಂದು ಶಿಕ್ಷಣಾ ಲಯವಿರುತ್ತದೆ. ಕಾರ್ಡಿಗನ್, ಇಲ್ಲಿಂದ ಪಾಟಿ ಗಳು ರಫ್ತವಾಗುತ್ತವೆ. ಅಬರಿಸ್ಟವಿಥ್, ಇದು ದೊಡ್ಡ ಬಂದರವಿರುತ್ತದೆ.

೯. ಪೆಂಬ್ರೋಕ–ಪೆಂಬ್ರೋಕ, ಇಲ್ಲಿಯೊಂದು ಕೋಟೆ ಯಿರುತ್ತದೆ, ಮತ್ತು ಇಲ್ಲಿ ಹಡಗುಗಳು ನಿಲ್ಲುತ್ತವೆ. ಇಲ್ಲಿ ರಿಚ್ಮಂಡದ ಅರ್ಲನಾದ ಹೇನ್ರಿಯು ದಂಡಿ ನೊಡನೆ ಬಂದು ಇಳಿದನು (೧೪೮೫). ಸೆಂಟಡೇವಿಡ್ಸ, ಇಲ್ಲಿ ವೇಲ್ಸದ ಮುಖ್ಯ ಸಾಧುವಾದ ಸೆಂಟ ಡೇವ್ಹಿಡನ ಗುಡಿಯಿರುತ್ತದೆ.

೧೦. ಕಾರ್ಮಾರ್ಥರ್ನ್ನ—ಕಾರ್ಮಾರ್ಥರ್ನ್ನ, ಇದು ದೊಡ್ಡ ವ್ಯಾಪಾರದ ಸ್ಥಳವಿರುತ್ತದೆ.

೧೧. ಬ್ರೆಕ್ನಾಕ್—ಬ್ರೆಕನ್ನ, ಇಲ್ಲಿ ಫ್ಲಾನೆಲ್ಲಿನ ಕಾರಖಾನೆ ಗಳವೆ.

೧೨. ಗ್ಲಾಮೊರ್ಗನ್ನ—ಮರ್ಥರ್‌ಟಿಡ್ವಿಲ್, ಇಲ್ಲಿ ಕಬ್ಬಿಣದ ಕಾರಖಾನೆಗಳವೆ. ಸ್ವಾನ್ಸಿ, ಇಲ್ಲಿ ಕಾರ್ನವಾಲ ಡೆವನ್ನ ತೆಂಕಣ ಅಮೇರಿಕ ಅಸ್ಟ್ರೇಲಿಯಾ ಮುಂತಾದ ಸ್ಥಳಗಳಿಂದ ಬಂದ ತಾಮ್ರದ ಅದರುಗಳನ್ನು ಶೋಧಿಸುತ್ತಾರೆ. ಕಾರ್ಡಿಫ್, ಇದರ ಕೋಟೆಯಲ್ಲಿ ೧ನೆಯ ಹೇನ್ರಿಯು ತನ್ನ ಅಣ್ಣನಾದ ರೋಬರ್ಟನನ್ನು ಸಾಯುವ ವರೆಗೆ ಸೆರೆಯಲ್ಲಿಟ್ಟನು; ಇಲ್ಲಿಂದ ಕಬ್ಬಿಣಕಲ್ಲಿದ್ದಲಿಗಳು ರಫ್ತವಾಗುತ್ತವೆ.

## ಗುಡ್ಡಗಳು.

ಚೇವಿಯಟ್ಟ ಬೆಟ್ಟದ ಸಾಲು, ನಾರ್ಥಂಬರ್ಲಂಡದ ಉತ್ತರಕ್ಕೆ ಇಂಗ್ಲಂಡ ಸ್ಕಾಟಲಂಡಗಳ ನಡುವೆ ಅದೆ. ನಾರ್ಥಂಬರ್ಲಂಡದಲ್ಲಿದ್ದ ಚೇವಿಯಟ್ಟದ ಶಿಖರವು ೨೬೭೬ ಅಡಿ ಯೆತ್ತರವಿರುತ್ತದೆ.

ಕಂಬ್ರಿಯನ್ ಗುಡ್ಡಗಳು, ಕಂಬರ್ಲಂಡ ವೆಸ್ಟಮೋರ್ಲಂಡ ಪರಗಣೆಗಳಲ್ಲಿಯೂ ಲಾಂಕಾಸ್ಟರ ಪರಗಣೆಯ ಉತ್ತರ ಭಾಗದಲ್ಲಿಯೂ ಇರುತ್ತವೆ; ಇವುಗಳಲ್ಲಿ ಸ್ಕಿಡಾ (೩೦೫೮), ಸ್ಕಾಫೆಲ್ಲ (೩೨೦೮), ಇವು ಕಂಬರ್ಲಂಡದಲ್ಲಿರುತ್ತವೆ. ಹೆಲ್‌ಹ್ವೆಲಿನ್ನವು (೩೧೧೮) ಕಂಬರ್ಲಂಡ, ವೆಸ್ಟಮೋರ್ಲಂಡಗಳ ನಡುವೆ ಅದೆ; ಈಗುಡ್ಡಗಳ ಸಾಲು

ವೇಲ್ಸದಲ್ಲಿ ಹಬ್ಬಿರುತ್ತದೆ. ಸ್ನೋಡನ್ (೩೫೭೩), ಕೇಡರ-ಆಯಡ್ರಿಸ್ (೨೯೨೯), ಪ್ಲಿನ್ಲಿಮನ್ (೨೪೬೯), ಬ್ರೆಕ್ಕನಾಕ್ (೨೯೧೦), ಇವು ಈಗುಡ್ಡಗಳ ಶಿಖರಗಳು. ಸ್ನೋಡನ್ನವು, ಇವುಗಳಲ್ಲಿ ಎಲ್ಲಕ್ಕೂ ಎತ್ತರವಾದ ಶಿಖರವು.

ಪೀನಿಯನ್ ಗುಡ್ಡದ ಸಾಲು, ಚೇವಿಯಟ್ಟದಿಂದ ಡರ್ಬಿ ಪರಗಣೆಯಲ್ಲಿದ್ದ ಪೀಕದ ವರೆಗೆ ಟ್ರೆಂಟ ಹೊಳೆಯ ದಂಡೆಯ ತನಕ ಹಬ್ಬಿರುತ್ತದೆ. ಇದರ ಶಿಖರಗಳು—ಕ್ರಾಸ್ಫೆಲ್ಲ (ಕಂಬರ್ಲಂಡ, ೨೮೯೨), ವ್ಹರ್ನಸಾಯಿಡ (೨೪೧೪), ಇಂಗ್ಲಬರೊ (೨೩೭೩), ಪೆನಿಗಂಟ (ಯಾರ್ಕ ೨೨೭೩),

ರೆಕ್ಕಿನ್ನವು, ಶ್ರಾಪ ಪರಗಣೆಯಲ್ಲಿರುತ್ತದೆ.

ಡೆವ್ಹನ್ ಗುಡ್ಡಗಳು, ಡೆವ್ಹನ್ನ ಕಾರ್ನವಾಲ ಪರಗಣೆಗಳಲ್ಲಿರುತ್ತವೆ. ಇವುಗಳಲ್ಲಿ ಎಕ್ಸಮೂರವು ಎತ್ತರವಾದ ಶಿಖರವು.

## ಹೊಳೆಗಳು.

### ಬಡಗಣ ಕಡಲಿಗೆ ಕೂಡುವ ಹೊಳೆಗಳು.

೧. ಟ್ವೈನ—ಇದು ಬಡಗಣ ಟೈನ ತೆಂಕಣ ಟೈನ ಈ ಯೆರಡು ಹೊಳೆಗಳು ಕೂಡಿ ಆಗಿರುತ್ತದೆ; ಬಡಗಣ ಟೈನವು ಚೇವಿಯಟ್ಟ ಗುಡ್ಡಗಳಲ್ಲಿ ಹುಟ್ಟುತ್ತದೆ. ತೆಂಕಣ ಟೈನವು ಕ್ರಾಸಫೆಲ್ಲದಲ್ಲಿ ಹುಟ್ಟುತ್ತದೆ. ಇದರ ಉದ್ದಳತೆ ೭೩ ಮೈಲು.

೨. ವಿಯರ—ಇದು ಡರ್ಹ್ಯಾಮ್‌ದಲ್ಲಿ ಹರಿಯುತ್ತದೆ. ಇದರ ದಂಡೆಯಲ್ಲಿ ಡರ್ಹ್ಯಾಮ್, ಸಂಡರ್ಲಂಡ.

೩. ಟೀಜ—ಇದು ಕ್ರಾಸಫೆಲ್ಲದಲ್ಲಿ ಹುಟ್ಟಿ ಯಾರ್ಕದ ಉತ್ತರ ಮೇರೆಯಾಗಿ ಹರಿಯುತ್ತದೆ. ಇದರ ದಂಡೆಯಲ್ಲಿ ವಾರ್ಲಿಂಗ್ಟನ್ನ ಸ್ಟಾಕ್ಟನ್ನವೆಂಬ ಪಟ್ಟಣಗಳವೆ. ಇದರ ಉದ್ದಳತೆ ೭೫ ಮೈಲು.

೪. ಹಂಬರ—(ಡರ್ವೆಂಟ, ಟ್ರೆಂಟ, ಊಜ ಈ ಮೂರು ಹೊಳೆಗಳಿಗೆ ಕೂಡಿ ಈಹೆಸರುಂಟು). ಇದು ಯಾರ್ಕ ಪರಗಣೆಯಲ್ಲಿ ಹರಿಯುತ್ತದೆ. ಇದರ ದಂಡೆಯಲ್ಲಿ ಹಲ್ಲ.

೫. ಗ್ರೇಟಊಜ—ಇದು ಬೆಡ್ಫರ್ಡ, ಹಂಟಿಂಗ್ಡನ್ನ, ಕೆಂಬ್ರಿಜ್ಜ, ನಾರ್ಫಾಕಗಳಲ್ಲಿ ಹರಿಯುತ್ತದೆ. ಇದರ ದಂಡೆಯಲ್ಲಿ ಬೆಡ್ಫರ್ಡ, ಇಲಾಯ. ಇದರ ಉದ್ದಳತೆ ೧೫೬ ಮೈಲು. ಇದರಲ್ಲಿ ಬೆಡ್ಫರ್ಡದ ವರೆಗೆ ಹಡಗುಗಳು ನಡೆಯುತ್ತವೆ.

೬. ಟೇಮ್ಸ—ಇದು ಶಾನನ್, ಸೆವ್ಹರ್ನ ಹೊಳೆಗಳನ್ನು ಳಿದು ಎಲ್ಲಕ್ಕೂ ದೊಡ್ಡ ಹೊಳೆಯು. ಟೇಮ್ಸ್, ಆಯ್ಸಿಸ್ ಈ ಎರಡು ಹೊಳೆಗಳು ಕೂಡಿ ಈ ಹೊಳೆಯಾಗುತ್ತದೆ. ಇದು ಗ್ಲೌಸ್ಟರದಲ್ಲಿದ್ದ ಕಾಟ್ಸವೋಲ್ಡ ಮರಡಿಗಳಲ್ಲಿ ಹುಟ್ಟಿ ೨೧೫ ಮೈಲು ಹರಿದು ಈಕಡಲಿಗೆ ಕೂಡುತ್ತದೆ. ಇದರಲ್ಲಿ ದೊಡ್ಡ ಹಡಗುಗಳು ಲಂಡನ್ನದವರೆಗೆ ಬರುತ್ತವೆ. ಆಕ್ಸಫರ್ಡ, ಬರ್ಕ, ಮಿಡಲ್ಸೆಕ್ಸ, ಸರೆ, ಬಕಿಂಗ್ಹ್ಯಾಮ್, ಕೆಂಟ ಈ ಪರಗಣೆಗಳಲ್ಲಿ ಇದು ಹರಿಯುತ್ತದೆ. ಇದರ ದಂಡೆಯಲ್ಲಿ ಆಕ್ಸಫರ್ಡ, ರೀಡಿಂಗ, ಪಟನ್ನ, ಉಯಿಂಡ್ಸರ, ಕಿಂಗ್ಸಟೌನ, ಲಂಡನ್ನ, ಉಲ್ವಿಚ್ಚ.

ಇಂಗ್ಲಿಷ ಕೊಲ್ಲೆಗೆ ಕೂಡುವಂತಹವು.

೧. ಊಜ—ಇದು ಸಸೆಕ್ಸದಲ್ಲಿದೆ. ದಂಡೆಯ ಮೇಲೆ ಲುಯಿ.

೨. ಇಚನ್ನ—ಇದು ಹ್ಯಾಂಪದಲ್ಲಿದೆ. ದಂಡೆಯ ಮೇಲೆ ಸೌಥಾಮ್ಪ್ಟನ್ನ, ವಿಂಚಸ್ಟರ.

೩. ಅವ್ಹನ್ನ—ಇದು ಉಯಿಲ್ಟ್ಸ, ಹ್ಯಾಂಪ ಪರಗಣೆಗಳಲ್ಲಿದೆ. ದಂಡೆಯ ಮೇಲೆ ಸಾಲಿಸ್ಬರಿ.

೪. ಎಕ್ಸ—ಇದು ಡೆವ್ಹನ್ನದಲ್ಲಿದೆ. ದಂಡೆಯ ಮೇಲೆ ಎಕ್ಸೀಟರ, ಡೆವ್ಹರ್ಟನ್ನ.

ಬ್ರಿಸ್ಟಲ್ಲಕೊಲ್ಲೆಗೆ ಕೂಡುವಂತಹವು.

೧. ಸೆವ್ಹರ್ನ—ಇದು ಪ್ಲಿನ್ನಲಿಮನ್ನ ಗುಡ್ಡದಲ್ಲಿ ಹುಟ್ಟುತ್ತದೆ. ಇದು ೨೪೦ ಮೈಲು ಉದ್ದವಿರುತ್ತದೆ. ಇದರಲ್ಲಿ ವೆಲ್ಸಪೂಲದ ವರೆಗೆ ಹಡಗುಗಳು ಬರುತ್ತವೆ. ಇದು ಮಾಂಟಗಾಮರಿ, ಶ್ರಾಪ, ಉಸ್ಟರ, ಗ್ಲಾಸ್ಟರ, ಈಪರಗಣೆಗಳಲ್ಲಿ ಹರಿಯುತ್ತದೆ. ಇದರ ದಂಡೆಯ ಮೇಲೆ ಶ್ರೂಜಬರಿ, ಉಸ್ಟರ, ಗ್ಲಾಸ್ಟರ, ಕಾರ್ಡಿಫ.

೨. ವಾಯ—ಇದು ಹರಫರ್ಡ, ಮನ್ಮಾಥ ಪರಗಣೆಗಳಲ್ಲಿ. ದಂಡೆಯ ಮೇಲೆ ಹರಫರ್ಡ, ಮನ್ಮಾಥ.

೩. ಕೆಳಗಿನ ಅವ್ಹನ್ನ—ಇದು ಪ್ಲಿನ್ನಲಿಮನ್ನದಲ್ಲಿ ಹುಟ್ಟಿ ಗ್ಲಾಸ್ಟರ ಪರಗಣೆಯಲ್ಲಿ ಹರಿಯುತ್ತದೆ. ದಂಡೆಯ ಮೇಲೆ ಬಾಥ, ಬ್ರಿಸ್ಟಲ್ಲ. ಇದರ ಉದ್ದಳತೆ ೧೪೮ ಮೈಲು.

೪. ಪ್ಯಾರೆಟ್ಟ—ಇದು ಸಮ್ಮರಸೆಟ್ಟ ಪರಗಣೆಯಲ್ಲಿ. ದಂಡೆಯ ಮೇಲೆ ಬ್ರಿಜ್ಜವಾಟರ.

## ಆಯರಿಶ್ ಕಡಲಿಗೆ ಕೂಡುವ ಹೊಳೆಗಳು.

೧. ಡೀ—ಇದು ಮೇರಿಯಾನೆಥ, ಡೆನ್ಬಾಯ್, ಫ್ಲಿಂಟ, ಚೆಷಾಯರ ಈ ಪರಗಣೆಗಳಲ್ಲಿ ಹರಿಯುತ್ತದೆ. ಇದರ ದಂಡೆಯ ಮೇಲೆ ಫ್ಲಿಂಟ, ಚೆಸ್ಟರ, ಬಾಲಾ ಪಟ್ಟಣಗಳವೆ.

೨. ಮರ್ಸಿ—ಇದು ಲಾಂಕಾಸ್ಟರ ಪರಗಣೆಯಲ್ಲಿ. ಇದರ ದಂಡೆಯ ಮೇಲೆ ಬರಕನ್ನಹೆಡ್ಡ, ಲಿವ್ಹರಪೂಲ, ಮಾಂಚೆಸ್ಟರ, ಸ್ಟಾಕ್ಪೋರ್ಟ. ಇದರ ಉದ್ದಳತೆ ೬೮ ಮೈಲು.

೩. ರಿಬ್ಬಲ್ಲ—ಇದು ಯಾರ್ಕ, ಲಾಂಕಾಸ್ಟರಗಳಲ್ಲಿ. ದಂಡೆಯ ಮೇಲೆ ಪ್ರೆಸ್ಟನ್ನ.

---

## ಸರೋವರಗಳು.

೧. ಡರ್ವೆಂಟವಾಟರ (ಕೆಸ್ವಿಕ್ಕ)—ಇದು ಕಂಬರ್ಲಂಡದಲ್ಲಿದೆ.

೨. ಅಲ್ಸವಾಟರ—ಇದು ಕಂಬರ್ಲಂಡ ವೆಸ್ಟಮೋರ್ಲಂಡಗಳ ನಡುವೆ.

೩. ವಿಂಡರಮಿಯರ—ಇದು ವೆಸ್ಟಮೋರ್ಲಂಡ ಲಾಂಕಾಸ್ಟರಗಳ ನಡುವೆ.

೪. ಬಾಲಾ—ಮೆರಿಯಾನೇಥದಲ್ಲಿ.

೫. ಕಾನಿಸ್ಟನ್ನ—ಇದು ಲಾಂಕಾಸ್ಟರದಲ್ಲಿ ಅದೆ.

---

## ಉಸುಬಿನ ದಿನ್ನೆಗಳು.

೧. ಡಾಗರ್‌ಬ್ಯಾಂಕ—ಇದು ಜರ್ಮನ್ನ ಸಮುದ್ರದ ದಂಡೆಯಲ್ಲಿ ಯಾರ್ಕ ಜಟ್ಲಂಡಗಳ ನಡುವೆ ಅದೆ.

೨. ಗುಡ್ವಿನ್ನಸ್ಯಾಂಡ್ಸ—ಇದು ಕೆಂಟದ ಪೂರ್ವಕ್ಕದೆ.

## ನಡುಗಡ್ಡೆಗಳು.

ಅಯರಿಶ್ ಕಡಲಿನಲ್ಲಿ ಮ್ಯಾನ್ನ* ಎಂಬ ನಡುಗಡ್ಡೆಯದೆ. ಡಗ್ಲಾಸು ಈನಡುಗಡ್ಡೆಯ ರಾಜಧಾನಿಯು. ಕ್ಯಾಸಲ್ಟೌನವು ಪಳಿದು ರಾಜಧಾನಿಯು. ಫಾಕ್ಸಡೇಲ, ಲಾಕ್ಸೆ ಎಂಬ ಊರುಗಳಲ್ಲಿ ಬೆಲೆಯುಳ್ಳ ಸೀಸದ ಕಣಿಗಳಿರುತ್ತವೆ. ಈ ನಡುಗಡ್ಡೆಯ ಕ್ಷೇತ್ರಫಲವು ೨೨೦ ಚಚ್ಚೌಕ ಮೈಲು; ಜನಸಂಖ್ಯೆ ೫೪೦೦೦. (೨) ಆಂಗಲ್ಸಿಯು ವೇಲ್ಸಕ್ಕೆ ಹೊಂದಿರುತ್ತದೆ. ಇದೂ ಹೋಲಿ-ಅಯ್ಲಂಡವೂ ಕೂಡಿ ವೇಲ್ಸದ ಒಂದು ಪರಗಣೆಯಾಗುತ್ತದೆ. (೩) ಲಂಡಿಯು ಬ್ರಿಸ್ಟಲ್ಲ ಅಖಾತದಲ್ಲಿದ್ದು ಡೆವ್ಹನ್ನ ಪರಗಣೆಗೆ ಸೇರಿರುತ್ತದೆ. (೪) ಸಿಲ್ಲಿ ನಡುಗಡ್ಡೆಗಳು ಕಾರ್ನವಾಲದ ನೈರುತ್ಯಕ್ಕೆ. ಇವು ಒಟ್ಟು ೧೪೫ ಇರುತ್ತವೆ. ಇವುಗಳೊಳಗೆ ೬ರಲ್ಲಿ ಮಾತ್ರ ಜನರು ವಾಸಿಸುತ್ತಾರೆ. ಇವುಗಳೊಳಗೆ ಎಲ್ಲಕ್ಕೂ ದೊಡ್ಡದಾದ ಸೆಂಟಮೇರಿಗಡ್ಡೆಯ ಸುತ್ತಳತೆಯು

---

* ಮ್ಯಾನ್ನ ನಡುಗಡ್ಡೆಯೂ ಚಾನಲ್ಲ ನಡುಗಡ್ಡೆಗಳೂ ಬ್ರಿಟಿಶ್ ಪರಗಣೆಗಳಲ್ಲಿ ಸೇರುವದಿಲ್ಲ. ಇವುಗಳ ಅಧಿಪತಿಗಳನ್ನು ಮಾತ್ರ ಮಹಾರಾಣಿಯವರು ನಿಯಮಿಸುತ್ತಾರೆ. ಉಳಿದ ರಾಜ್ಯಾಧಿಕಾರದಲ್ಲಿ ಅವರು ಕಯ್ಹಾಕುವದಿಲ್ಲ. ಚಾನಲ್ಲನಡುಗಡ್ಡೆಗಳಲ್ಲಿ ಫ್ರೆಂಚವು ಸರಕಾರದ ಭಾಷೆಯಾಗಿರುತ್ತದೆ.

೧೦ ಮೈಲು ಆದೆ. (೫) ಜರ್ಸಿ, ಗ್ವೆರ್ನಸಿ, ಆಲ್ಡರ್ನೀ, ಸಾರ್ಕ ಇವು ನಾರ್ಮಂಡಿಯ ದಂಡೆಯ ಮೇಲವೆ; ಇವುಗಳಿಗೆ ಚಾನಲ್ ನಡುಗಡ್ಡೆಗಳೆನ್ನುತ್ತಾರೆ. ಆಲ್ಡರ್ನೀ ಗ್ವೆರ್ನಸೇಗಳಲ್ಲಿ ಉತ್ತಮಜಾತಿಯ ಆಕಳಗಳನ್ನು ಬೆಳಸುತ್ತಾರೆ. ಈನಡುಗಡ್ಡೆಗಳ ಕ್ಷೇತ್ರಫಲವು ಒಟ್ಟು ೭೫ ಚ. ಮೈಲು; ಜನಸಂಖ್ಯೆ ೮೮೮೦೦. (೬) ವಾಯಿಟವು ಹ್ಯಾಂಪ ಪರಗಣೆಯ ದಕ್ಷಿಣಕ್ಕೆ. ಇದರಲ್ಲಿ ಕೇರಿಸ್ಬ್ರುಕವೆಂಬದೊಂದು ಕೋಟೆಯುಂಟು. ಇಲ್ಲಿಯ ಭೂಮಿಯು ಬೆಳೆಯುಳ್ಳದ್ದು. ಇದರ ಮುಖ್ಯಪಟ್ಟಣವು ನ್ಯೂಪೋರ್ಟ. (೭) ಸೆಪ್ಪಿಯು ಕೆಂಟದ ಉತ್ತರಕ್ಕೆ. (೮) ಥಾನೆಟ್ಟವು ಕೆಂಟದ ಈಶಾನ್ಯಕ್ಕೆ. (೯) ಫಾರ್ನ, ಕೊಕೆ, ಹೋಲಿ ಇವು ನಾರ್ಥಂಬರ್ಲಂಡದ ಪೂರ್ವಕ್ಕೆ. ೧೮೩೮ರಲ್ಲಿ ಫಾರ್ನ ನಡುಗಡ್ಡೆಯ ಹತ್ತರ ಹಡಗೊಡೆದಾಗ ಗ್ರೇಸ ಡಾರ್ಲಿಂಗ ದೊರೆಸಾನಿಯು ಬಹು ಶೌರ್ಯದಿಂದ ಅದರಲ್ಲಿದ್ದ ಜನರನ್ನುಳಿಸಿದಳು.

---

## ಭೂಶಿರಗಳು.

ಸ್ಪರ್ನಹೆಡ್ಡ, ಪ್ಲಾಂಬರೊಹೆಡ್ಡ, ಇವು ಯಾರ್ಕದಲ್ಲಿ. ಲೋವೆಸ್ಟಾಫ್ಟವು ಸಫಾಕದಲ್ಲಿ. ನಾರ್ಥಫೋರ್ಲಂಡ, ಸೌಥ ಫೋರ್ಲಂಡ, ಡಂಜನ್ನೆಸ್ಸ, ಇವು ಕೆಂಟದಲ್ಲಿ. ಬೀಚಿಹೆಡ್ಡ, ಸೆಲ್ಸಿಯೂಬಿಲ್ಲ, ಇವು ಸಸೆಕ್ಸದಲ್ಲಿ. ಸೆಂಟ ಆಲ್ಬನ್ಸಹೆಡ್ಡ, ಪೋರ್ಟಲಂಡ ಪೊಯಿಂಟ ಇವು ಡಾರ್ಸೆಟ್ಟದಲ್ಲಿ. ಸ್ಟಾರ್ಟಪೊಯಿಂಟ, ಹರ್ಟಲಂಡಪೊಯಿಂಟ ಇವು ಡೆವನ್ನದಲ್ಲಿ. ಲ್ಯಾಂಡ್ಸೆಂಡ, ಲಿಝರ್ಡ, ಇವು ಕಾ

ರ್ನವಾಲದಲ್ಲಿ. ಮರ್ಸ್ಸಹೆಡ್ಡವು ಗ್ಲಾಮರ್ಗನ್ನದಲ್ಲಿ. ಸೇಂಟಡೇವಿಡ್ಸಹೆಡ್ಡವು ಪೆಂಬ್ರೋಕದಲ್ಲಿ. ಗ್ರೇಟಆರ್ಮ್ಸ್ ಹೆಡ್ಡವು ಡೆನ್ಬಾಯಿನಲ್ಲಿ. ಸೇಂಟಬೀಸಹೆಡ್ಡವು ಕಂಬರ್ಲಂಡದಲ್ಲಿ.

## ಸಾಮುದ್ರಧುನಿಗಳು.

೧. ಡವ್ಹರ್ —ಇದು ಗುಡ್ವಿನ್ನ ಸ್ಯಾಂಡ್ಸ, ಕೆಂಟದ ದಂಡೆ ಇವುಗಳ ನಡುವೆ. ಇದು ಪೃಥ್ವಿಯಲ್ಲಿ ಎಲ್ಲಕ್ಕೂ ದೊಡ್ಡ ಹಡಗು ನಿಲ್ಲುವ ಸ್ಥಳವು.

೨. ಸ್ಪಿಟ್ಹೆಡ್ಡ, ಸೋಲೆಂಟ ಇವು ಇಂಗ್ಲಂಡ ವಾಯಿಟ ಇವುಗಳ ನಡುವೆ ಅವೆ.

೩. ಮಿನಾಯಿ, ಇದು ಕಾರ್ನಾರ್ವನ್ನ ಅಂಗಲ್ಸಿಗಳ ನಡುವೆ.

## ಉಪಸಾಗರಗಳೂ ಅಖಾತಗಳು.

೧. ಬ್ರಿಡ್ಲಿಂಗ್ಟನ್ನ—ಇದು ಯಾರ್ಕ ಪರಗಣೆಯಲ್ಲಿ.

೨. ಹಂಬರಮೌಥ—ಇದು ಯಾರ್ಕ, ಲಿಂಕನ್ನಗಳ ನಡುವೆ.

೩. ವಾಶ್*—ಇದು ಲಿಂಕನ್ನ, ನಾರ್ಫೋಕಗಳ ನಡುವೆ. ಇದಕ್ಕೆ ಗ್ರೇಟವೂಜ ಹೊಳೆಯು ಕೂಡುತ್ತದೆ.

೪. ಟಾರ್ಬೆ—ಇದು ಡೆವ್ಹನ್ನದ ಅಗ್ನೇಯಕ್ಕೆ.

೫. ಮೌಂಟ್ಸ—ಇದು ಕಾರ್ನವಾಲದ ದಕ್ಷಿಣಕ್ಕೆ.

೬. ಬ್ರಿಸ್ಟಲ್ಲಕೊಲ್ಲಿ—ಇದು ಸಮ್ಮರಸೆಟ್ಟ, ಗ್ಲ್ಯಾಮೊರ್ಗನ್ನಗಳ ನಡುವೆ.

---

* ಇದನ್ನು ದಾಟುವಾಗ ಜಾನನು ತನ್ನ ಬೆಲೆಯುಳ್ಳ ಒಡವೆಗಳನ್ನೂ ಹಣವನ್ನೂ ಕಳಕೊಂಡನು (೧೨೧೬).

೭. ಮಿಲ್ಲಫರ್ಡಹೇವನ್ನ, ಸೆಂಟಬ್ರಾಯಿಡ್ಸ-ಇವು ಪೆಂಬ್ರೋಕದ ಪಶ್ಚಿಮಕ್ಕೆ.
೮. ಕಾರ್ಡಿಗನ್-ಇದು ಕಾರ್ಡಿಗನ್ನದ ಪಶ್ಚಿಮಕ್ಕೆ.
೯. ಮೋರಕ್ಯಾಂಬಿಬೆ-ಇದು ಲಾಂಕಾಸ್ಟರದಲ್ಲಿ.
೧೦. ಕಾರಮಾರ್ದನ್ನ-ಇದು ಕಾರಮಾರ್ದನ್ನದಲ್ಲಿ.
೧೧. ಸಾಲ್ವೆಫರ್ಥ-ಇದು ಕಂಬರ್ಲಂಡ ಸ್ಕಾಟಲಂಡಗಳ ನಡುವೆ.

---

# ಸ್ಕಾಟಲಂಡ.

ಮೇರೆಗಳು-ಸ್ಕಾಟಲಂಡದ ಬಡಗಣಿಗೂ ಪಡುವಣಿಗೂ ಅಟ್ಲಾಂಟಿಕ ಮಹಾಸಾಗರವು; ತೆಂಕಣಿಗೆ ಇಂಗ್ಲಂಡವೂ ಅಯರಿಶ್ ಕಡಲೂ; ಮೂಡಣಿಗೆ ಬಡಗಣ ಕಡಲು ಅಥವಾ ಜರ್ಮನ್ ಸಮುದ್ರವು; ಇಂಗ್ಲಂಡ ಸ್ಕಾಟಲಂಡಗಳ ನಡುವೆ ಸಾಲ್ವೆಯುಪಸಾಗರವೂ ಚೇವಿಯಟ್ಟದ ಗುಡ್ಡದ ಸಾಲೂ ಟ್ವೀಡ ಹೊಳೆಯೂ ಇರುತ್ತವೆ.

ವಿಸ್ತಾರವು-ಸ್ಕಾಟಲಂಡದ ಉದ್ದಳತೆಯು ಡನೆಟ್ಟ ಭೂಶಿರದಿಂದ (ರೇಖಾಂಶ ೫೮° ೪೦') ಗಾಲೊವೆ ಭೂಶಿರದ ವರೆಗೆ (ರೇಖಾಂಶ ೫೪° ೩೮') ೨೮೮ ಮೈಲು; ಇದರ ಅಗಲಳತೆ ಬಚೆನ್ನೆಸ್ಸದಿಂದ (ಪಶ್ಚಿಮ ಅಕ್ಷಾಂಶ ೧° ೪೬') ಅಡ್ನಾರ್ಮರ್ಚನ್ನದ ವರೆಗೆ (ಪಶ್ಚಿಮ ಅಕ್ಷಾಂಶ ೬° ೧೩') ೧೩೫ ಮೈಲು. ಈ ದೇಶದ ಒಟ್ಟು ಕ್ಷೇತ್ರಫಲವು

೨೯,೮೨೦ ಚಚ್ಚೌಕು ಮೈಲು, ಅಥವಾ ಇಂಗ್ಲಂಡ ವೇಲ್ಸದೇಶಗಳ ಕ್ಷೇತ್ರಫಲದ ಅರ್ಧಕ್ಕಿಂತ ತುಸು ಕಡಿಮೆ. ನಡುಗಡ್ಡೆಗಳನ್ನುಳಿದು ಈದೇಶದ ಕ್ಷೇತ್ರಫಲವು ೨೭,೦೦೦ ಚಚ್ಚೌಕು ಮೈಲು.

ಜನಸಂಖ್ಯೆಯು—ಇಂಗ್ಲಂಡಕ್ಕಿಂತ ಈ ದೇಶದ ಜನಸಂಖ್ಯೆಯು ಕಡಿಮೆ ಇರುತ್ತದೆ. ೧೮೮೯ರಲ್ಲಿ ಇಲ್ಲಿ ೩೯,೪೯,೩೯೩ ಜನರಿದ್ದರು; ಅಂದರೆ ಸುಮಾರು ಧಾರವಾಡ ಬೆಳಗಾವ ವಿಜಾಪೂರ ಕಾನಡಾ ಈ ನಾಲ್ಕು ಜಿಲ್ಹೆಗಳಷ್ಟು ಜನರಿದ್ದರು. ಈ ದೇಶದಲ್ಲಿ ೨ ಕುಲದ ಜನರಿರುತ್ತಾರೆ. ಉತ್ತರ ಭಾಗದಲ್ಲಿದ್ದ ಹಾಯಲಂಡರರು (ಏರ್ನಾಡಿನವರು) ಕೆಲ್ಟಿಕ್ ಕುಲದವರು; ಇವರು ಅರ್ಸ ಅಥವಾ ಗ್ಯಾಲಿಕ್ ಎಂಬ ನುಡಿಯನ್ನಾಡುತ್ತಾರೆ. ದಕ್ಷಿಣದಲ್ಲಿದ್ದ ಲೋಲಂಡರರು (ಇಳನಾಡಿನವರು) ಟ್ಯೂಟೊನಿಕ್ ಕುಲದವರು; ಇವರು ಅಂಗ್ಲೊಸ್ಯಾಕ್ಸನ್ ಎಂಬ ನುಡಿಯನ್ನಾಡುತ್ತಾರೆ. ಈ ದೇಶದಲ್ಲಿ ೧ ಚಚ್ಚೌಕು ಮೈಲಿಗೆ ಸುಮಾರು ೧೩೨ ಜನರಿರುತ್ತಾರೆ.

ಹವೆಯು—ಈ ದೇಶದ ಹವೆಯು ಇಂಗ್ಲಂಡಕ್ಕಿಂತ ಶೀತವಾದದ್ದು; ಏರ್ನಾಡಿನಲ್ಲಿ (ಹಾಯಲಂಡದಲ್ಲಿ) ಚಳಿ ಮಳೆಗಳು ಬಹಳ. ಪ್ರತಿವರ್ಷ ಈ ದೇಶದ ಮೂಡಣ ದಂಡೆಯಲ್ಲಿ ಸುಮಾರು ೨೨ರಿಂದ ೩೦ ಇಂಚು ಮಳೆ ಬೀಳುತ್ತದೆ; ಪಡುವಣ ದಂಡೆಯಲ್ಲಿ ೩೦ರಿಂದ ೪೪ ಇಂಚು ಮಳೆ ಬೀಳುತ್ತದೆ.

ಹುಟ್ಟುವಳಿಗಳು—ಈ ದೇಶದ ಹುಟ್ಟುವಳಿಗಳು ಸಾಧಾರಣವಾಗಿ ಇಂಗ್ಲಂಡದಂತೆಯೇ ಇರುತ್ತವೆ.

ಖನಿಜಗಳು—ಈ ದೇಶದಲ್ಲಿ ಕಬ್ಬಿಣಕಲ್ಲಿದ್ದಲಿಗಳು ಹೇರಳವಾಗಿ ದೊರೆಯುತ್ತವೆ. ಇವು ಫೋರ್ಥ ಕ್ಲೈಡ ಅಖಾತಗಳ ನಡುವಿನ ಪ್ರದೇಶದಲ್ಲಿ, ಅಂದರೆ ಫಾಯಿಫ ಪರಗಣೆಯಿಂದ ಏರ ಪರಗಣೆಯು ವರೆಗೆ ದೊರೆಯುತ್ತವೆ. ಗ್ರಾಂಪಿಯನ್ನ ಗುಡ್ಡದ ಸಾಲಿನಲ್ಲಿಯೂ ಅರನ್ ನಡುಗಡ್ಡೆಯಲ್ಲಿಯೂ ಕರಿಗಲ್ಲು ದೊರೆಯುತ್ತವೆ. ಇವುಗಳ ಹೊರತು ಸೀಸ ಮನೆಕಟ್ಟುವ ಕಲ್ಲುಗಳು ಈದೇಶದ ದಕ್ಷಿಣಭಾಗದಲ್ಲಿ ಸಿಗುತ್ತವೆ.

ಹೋರೆಗಳು—ಈ ದೇಶದ ಇಳನಾಡಿನಲ್ಲಿದ್ದಂತಹ ಜಾಣರಾದ ಒಕ್ಕಲಿಗರನ್ನು ಬೇರೆ ದೇಶಗಳಲ್ಲಿ ಕಾಣುವದು ಅಪರೂಪವೇ ಸರಿ. ಇಳನಾಡಿನವರು ವಿಶೇಷವಾಗಿ, ಏನ್ರಾಡಿನವರು ತಕ್ಕಮಟ್ಟಗೆ, ದನಗಳಜೋಪಾನಮಾಡುವ ಕೆಲಸವನ್ನೂ ಮೀನುಹಿಡಿಯುವ ಕೆಲಸವನ್ನೂ ಮಾಡುತ್ತಾರೆ.

ಕಯ್ಗಾರಿಕೆಯೊಡವೆಗಳು—ಕ್ಲೈಡ ಫೋರ್ಥ ಅಖಾತಗಳ ನಡುವಿನ ಪ್ರದೇಶದಲ್ಲಿಯೂ ಫೋರಫಾರ ಫಾಯಿಫ ಪರಗಣೆಗಳಲ್ಲಿಯೂ ಕಯ್ಗಾರಿಕೆಯೊಡವೆಗಳು ಹೆಚ್ಚಾಗಿ ಆಗುತ್ತವೆ. ಅರಳೆಯ ಕಾರಖಾನೆಗಳು ಗ್ಲಾಸಗೊ ಲಾನಾರ್ಕ ರೆನ್‌ಫ್ರು ಪರಗಣೆಗಳಲ್ಲಿರುತ್ತವೆ; ನಾರುಬಟ್ಟೆಗಳ ಕಾರಖಾನೆಗಳು ಹೆಚ್ಚಾಗಿ ಡಂಡಿ (ಫೋರಫಾರ) ಡನ್ಫರ್ಮಲಾಯಿನ (ಫಾಯಿಫ) ಈವೂರುಗಳಲ್ಲಿರುತ್ತವೆ; ಉಣ್ಣೆಯ ಕಾರಖಾನೆಗಳು ವಿಶೇಷವಾಗಿ ಅಬರ್ಡೀನ, ಸ್ಟರ್ಲಿಂಗ, ಏರ, ಫಾಯಿಫ, ರೆನ್ಫ್ರು, ಫೋರಫಾರ, ಲಾನಾರ್ಕ ಈಪರಗಣೆಗಳಲ್ಲಿರುತ್ತವೆ; ಕಾಶ್ಮೀರಗಳು ಹೆಚ್ಚಾಗಿ ಗಾಲಾಸೀಲ್ಸ, ಸೆಲ್ಕರ್ಕ, ಹಾವಿಕ್ಕ ಈಯೂರುಗಳಲ್ಲಿ ಹುಟ್ಟುತ್ತವೆ; ಪೇಜಲಿಯಲ್ಲಿ ಶಾಲುಗಳೂ ಉರುಟರವೆಗಳೂ ಹುಟ್ಟುತ್ತವೆ.

ವ್ಯಾಪಾರ—ಈ ದೇಶದ ವ್ಯಾಪಾರವು ಬಹುಶಃ ಇಂಗ್ಲಂಡದಂತೆಯೇ ಇರುತ್ತದೆ. ಇಲ್ಲಿಗೆ ಸಂಸ್ಕಾರವಾಗದ ಸರಕುಗಳು ಪರದೇಶದಿಂದ ಬರುತ್ತವೆ. ಮುಂದೆ ಅವು ತರತರದ ಕಯ್ಗಾರಿಕೆಯೊಡವೆಗಳಾಗಿ ಪರದೇಶಕ್ಕೆ ಹೋಗುತ್ತವೆ. ಕಲ್ಲಿದ್ದಲಿ ಕಬ್ಬಿಣ ಮೀನುಗಳಾದರೂ ಇಲ್ಲಿಂದ ರಫ್ತವಾಗುತ್ತವೆ. ಈ ದೇಶದ ಮುಖ್ಯ ಬಂದರವು ಗ್ಲಾಸಗೊ. ಇದರ ಹೊರತು ಲೀಥ, ಗ್ರೀನಾಕ್ ಅಬರ್ಡೀನ, ಡಂಡೀ, ಆಯರ್ವಿನ್, ಮಾಂಟರೋಜ ಮುಂತಾದ ದೊಡ್ಡ ಬಂದರಗಳಿರುತ್ತವೆ. ಗ್ಲಾಸಗೊ, ಗ್ರೀನಾಕ್, ಪೋರ್ಟಗ್ಲಾಸಗೊ ಇವುಗಳಲ್ಲಿ ಯುಗೆಪಡಗುಗಳನ್ನು ಕಟ್ಟುತ್ತಾರೆ.

## ಉಗೆಬಂಡಿಯ ದಾರಿಗಳು.

೧ನೆಯದು—ಎಡಿಂಬರೋದಿಂದ ಬರ್ವಿಕ್ಕಕ್ಕೂ, ಕಾರ್ಲಾಯಿಲಕ್ಕೂ, ಗ್ಲಾಸಗೋಕ್ಕೂ, ಪರ್ಥಕ್ಕೂ, ಡಂಡಿಗೂ ಹೋಗಿರುತ್ತದೆ.

೨ನೆಯದು (ಕ್ಯಾಲೆಡೋನಿಯದ ಮಾರ್ಗ)—ಗ್ಲಾಸಗೊದಿಂದ ಕಾರ್ಲಾಯಿಲ, ಪರ್ಥ, ಡಂಡಿ, ಅಬರ್ಡೀನ ಮುಂತಾದ ಪಟ್ಟಣಗಳಿಗೆ ಹೋಗಿರುತ್ತದೆ.

೩ನೆಯದು (ದಕ್ಷಿಣದ ಮಾರ್ಗ)—ಗ್ಲಾಸಗೊದಿಂದ ಹೊರಟು ಕಿಲ್ಮರ್ನಾಕ್, ಡಂಫ್ರೀಜ, ಅನನ್, ಇವುಗಳ ಮೇಲಿಂದ ಕಾರ್ಲಾಯಿಲಕ್ಕೆ ಹೋಗಿರುತ್ತದೆ.

೪ನೆಯದು (ಉತ್ತರದ ಮಾರ್ಗ)—ಅಬರ್ಡೀನದಿಂದ ಟೈನ ಮೌಥಕ್ಕೆ ಹೋಗಿರುತ್ತದೆ.

೫ನೆಯದು—ಪರ್ಥದಿಂದ ಫಸೋರ್ಟದ ವರೆಗೆ ಹೋಗಿರುತ್ತದೆ.

## ಪರಗಣೆಗಳು.

ಸ್ಕಾಟಲಂಡದಲ್ಲಿ ಒಟ್ಟು ೩೩ ಪರಗಣೆಗಳಿರುತ್ತವೆ; ಅವುಗಳಾವವೆಂದರೆ :—

### ಉತ್ತರದಲ್ಲಿ.

೧. ಅರ್ಕನಿಸೆಟ್ಲಂಡಗಳು—ಕರ್ಕವಾಲ, ಇಲ್ಲಿಂದ ಮೀನುಗಳೂ ಮಾಂಸವೂ ಬೆಣ್ಣೆಯೂ ಪರಸ್ಥಳಗಳಿಗೆ ಹೋಗುತ್ತವೆ; ಇಲ್ಲಿ ೧೧೩೮ರಲ್ಲಿ ಕಟ್ಟಿಸಿದ ಒಂದು ಗುಡಿಯುಂಟು. ಲರ್ವಿಕ್ಕ, ಇಲ್ಲಿ ಹಣಿಕೆಯ ಸಾಮಾನುಗಳಾಗುತ್ತವೆ.

೨. ಕೇಥ್ನೆಸ್—ವಿಕ್ಕ, ಥರ್ಸೋ ಇವುಗಳಲ್ಲಿ ಮೀನುಹಿಡಿಯುವ ಕೆಲಸವನ್ನು ಬಹಳ ಜನರು ಮಾಡುತ್ತಾರೆ.

೩. ಸದರ್ಲಂಡ—ಗಾಲಸ್ಪಿ, ಇಲ್ಲಿ ಸದರ್ಲಂಡದ ಡ್ಯೂಕನಿರುತ್ತಾನೆ.

೪. ಕ್ರಾಮರ್ಟಿ—ಕ್ರಾಮರ್ಟಿ, ಇಲ್ಲಿ ಹ್ಯೂಮಿಲ್ಲರನು ಹುಟ್ಟಿದನು. ಇವನು ಭೂಗರ್ಭಶಾಸ್ತ್ರದಲ್ಲಿ ಪ್ರವೀಣನಾಗಿದ್ದನು.

೫. ರಾಸ್—ಸ್ಟೋರ್ನೋವೆ, ಇದು ಹೆಬ್ರಿಡೀಸ ನಡುಗಡ್ಡೆಗಳಲ್ಲಿ ದೊಡ್ಡದಾದ ಲುಯಿ ನಡುಗಡ್ಡೆಯ ಮುಖ್ಯಪಟ್ಟಣವು; ಇಲ್ಲಿ ಮೀನುಹಿಡಿಯುವ ಕೆಲಸವು ನಡೆಯುತ್ತದೆ. ಲುಯಿ ನಡುಗಡ್ಡೆಯು ಈ ಪರಗಣೆಗೆ ಸೇರಿರುತ್ತದೆ.

೬. ಇನ್ವ್ಹರ್ನೆಸ್—ಕಲ್ಲೊಡನ್ನವಾರ್, ಇಲ್ಲಿ ಅರಸುಮಗನಾದ ಚಾರ್ಲಸ ಎಡ್ವರ್ಡನನ್ನು ಕಂಬರ್ಲಂಡದ ಡ್ಯೂಕನು ೧೭೪೬ರಲ್ಲಿ ಸೋಲಿಸಿದನು. ಫೋ

ರ್ಟ ಜಾರ್ಜ, ಫೋರ್ಟ ಅಗಸ್ಟಸ್, ಫೋರ್ಟ ಉಯಿಲ್ಯಮ್ ಇವು ಮೋಸಗಾರನ ಪಕ್ಷದವರಾದ ಸ್ಕಾಟ್ಟರನ್ನು ಪ್ರತಿಬಂಧಿಸಲಿಕ್ಕೆ ಕಟ್ಟಲ್ಪಟ್ಟವು. ಸ್ಕಾಯಿ, ಹಾರಿಸ, ಯುಯಿಸ್ಟ, ಜೆನ್ನಬಿಕೂಲಾ ಈ ನಡುಗಡ್ಡೆಗಳು ಈಪರಗಣಿಗೆ ಸೇರಿರುತ್ತವೆ. ಇನ್ವ್ಹಲಾರ್ಕಿ, ಇಲ್ಲಿ ಮಾಂಟರೋಜದ ಅರ್ಲನು ಸ್ಕಾಟ್ಟರನ್ನು ಸೋಲಿಸಿದನು (೧೬೪೫).

೭. ನೇರ್ನ—ನೇರ್ನ, ಇಲ್ಲಿಯ ನೀರು ಉತ್ತಮವಿದ್ದುದರಿಂದ ಬಹಳ ಜನರು ಇಲ್ಲಿಗೆ ಸ್ನಾನಮಾಡಲಿಕ್ಕೆ ಬರುತ್ತಾರೆ. ಆಲ್ಡ್ಡಿಯೂರ್ನ, ಇಲ್ಲಿ ಮಾಂಟರೋಜದ ಅರ್ಲನು ಸ್ಕಾಟ್ಟರನ್ನು ಸೋಲಿಸಿದನು (೧೬೪೫).

೮. ಮೋರೆ (ಎಲ್ಜಿನ್)—ಎಲ್ಜಿನ್, ಇಲ್ಲಿಯೊಂದು ಬುನಾದಿಯ ಗುಡಿಯಿರುತ್ತದೆ.

೯. ಬಾನ್ಫ—ಬಾನ್ಫ, ಇಲ್ಲಿಂದ ಮೀನುಗಳೂ ಕಾಳೂ ರಫ್ತವಾಗುತ್ತವೆ.

೧೦. ಅಬರ್ಡೀನ—ಅಬರ್ಡೀನ (ಡೀ ಹೊಳೆಯ ಮೇಲೆ), ಇದು ಉತ್ತರ ಭಾಗದಲ್ಲಿ ವಿಶ್ವವಿದ್ಯಾಲಯದ ಬಗ್ಗೆ ಹೆಸರಾಗಿರುತ್ತದೆ; ಇದು ಸ್ಕಾಟಲಂಡದಲ್ಲಿ ೪ನೆಯ ದೊಡ್ಡ ಪಟ್ಟಣವು; ಇದರ ಪತ್ತರ ಮಾಂಟರೋಜದ ಅರ್ಲನು ಸ್ಕಾಟ್ಟರನ್ನು ಸೋಲಿಸಿದನು (೧೬೪೪); ಇಲ್ಲಿ ವ್ಯಾಪಾರವು ಬಹಳ ನಡೆಯುತ್ತದೆ; ಇದರಿಂದ ೪೫ ಮೈಲಿನ ಮೇಲೆ ಒಂದು ರಮಣೀಯವಾದ ಸ್ಥಳದಲ್ಲಿ, ಡೀ ಹೊಳೆಯ ದಂಡೆಯಮೇಲೆ, ಬಾಲ್ಮೋರಲ್ಲೆಂಬ ಕೋಟೆಯು ಮಹಾರಾಣಿಯ

ವರ ವಾಸಸ್ಥಾನವಾಗಿದೆ. ಪೀಟರಹೆಡ್ಡ, ಇದು ಸ್ಕಾಟಲಂಡದ ತೀರ ಪೂರ್ವಕ್ಕಿರುವ ಊರು; ಇಲ್ಲಿ ಮೀನುಹಿಡಿಯುವ ಕೆಲಸವು ನಡೆಯುತ್ತದೆ. ಫ್ರೇಜಬರ್ಗೊ, ಇಲ್ಲಿಯಾದರೂ ಮೀನು ಹಿಡಿಯುವ ಕೆಲಸವು ನಡೆಯುತ್ತದೆ.

೧೧. ಕಿಂಕರ್ಡಾಯಿನ್—ಸ್ಟೋನಹೇವನ್, ಬರ್ಫ, ಫಿಂಡನ್ ಇವುಗಳಲ್ಲಿ ಜನರು ಮೀನು ಹಿಡಿಯುತ್ತಾರೆ.

ಮಧ್ಯದಲ್ಲಿ.

೧೨. ಫಾಯಿಫ—ಸೆಂಟಂಡ್ರೂಜ, ಇಲ್ಲಿಯೊಂದು ಹೆಸರಾದ ವಿದ್ಯಾಲಯುವದೆ; ಕೂಪರ, ಇಲ್ಲಿ ನಾರುಬಟ್ಟೆಗಳಾಗುತ್ತವೆ; ಕಿರಕಲ್ಡಿ, ಇಲ್ಲಿ ಹಡಗುಗಳನ್ನು ಕಟ್ಟುವದಲ್ಲದೆ ನೆಲದ ಮೇಲೆ ಹಾಸುವ ಅರಿವೆಗಳನ್ನು ಯಂತ್ರಗಳಿಂದ ಮಾಡುತ್ತಾರೆ. ಡನ್ಫರ್ಮಲಾಯಿನ, ಇದು ಮೊದಲು ಒಮ್ಮೆ ಸ್ಕಾಟಲಂಡದ ರಾಜಧಾನಿಯಾಗಿತ್ತು; ಇಲ್ಲಿ ತರತರದ ಕಸೂತಿಯು ಹಾಕಿದ ಅರಿವೆಗಳನ್ನು ಮಾಡುತ್ತಾರೆ.

೧೩. ಕಿನ್ರಾಸ್—ಕಿನ್ರಾಸ್, ಇಲ್ಲಿ ಜನಸಂಖ್ಯೆಯು ತೀರ ಕಡಿಮೆಯಿರುತ್ತದೆ; ಇದರ ಸೆರೆಯಲ್ಲಿ ಲೆವ್ಹನ್ ಹೊಳೆಯ ದಂಡೆಯ ಮೇಲೆ ಲಾಚ್ಲೆವ್ಹನ್ನವೆಂಬ ಕೋಟೆಯಲ್ಲಿ ಸ್ಕಾಟಲಂಡದ ಮೇರಿ ರಾಣಿಯನ್ನು ಸೆರೆಯಲ್ಲಿಟ್ಟದ್ದರು (೧೫೬೭—೬೮).

೧೪. ಕ್ಲಾಕ್ಮ್ಯಾನನ್ನ—ಅಲ್ಲೋವಾ, ಇಲ್ಲಿ ಸರಾಯಿಯೂ ಉಣ್ಣೆಯೂ ಹುಟ್ಟುತ್ತವೆ; ಇದು ಒಂದು ಬಂದರ

ವಿರುತ್ತದೆ; ಇಲ್ಲಿ ಕಬ್ಬಿಣಕಲ್ಲಿದ್ದಲಿಗಳ ವ್ಯಾಪಾರವಾಗುತ್ತದೆ.

೧೫. ಸ್ಟರ್ಲಿಂಗ-ಬೆನಾಕ್‌ಬರ್ನ, ಇದು ಸ್ಟರ್ಲಿಂಗದ ತೆಂಕಣಿಗೆ ೨ ಮೈಲಿನ ಮೇಲೆ ಇರುತ್ತದೆ; ಇಲ್ಲಿ ಸ್ಕಾಟಲಂಡದ ಅರಸನಾದ ರೋಬರ್ಟಬ್ರೂಸನು, ಇಂಗ್ಲಂಡದ ೨ನೆಯ ಎಡ್ವರ್ಡನನ್ನು ೧೩೧೪ರಲ್ಲಿ ಪೂರ್ಣವಾಗಿ ಸೋಲಿಸಿದನು. ಸ್ಟರ್ಲಿಂಗ, ಇಲ್ಲಿ ಸ್ಟುವರ್ಟ ಮೇರಿಯ ಮಗನಾದ ಜೇಮ್ಸನಿಗೆ ಪಟ್ಟಗಟ್ಟಿದರು. ಫಾಲ್ಕಕರ್ಕ, ಇಲ್ಲಿ ಪ್ರತಿವರ್ಷ ದನಗಳ ಪ್ರದರ್ಶನವಾಗುತ್ತದೆ; ಇಲ್ಲಿಯೇ ೧೨೯೮ರಲ್ಲಿ ೧ನೆಯ ಎಡ್ವರ್ಡನು ವಾಲೇಸನನ್ನೂ, ೧೭೪೬ರಲ್ಲಿ ಮೋಸಗಾರನು ಅರಸನ ದಂಡನ್ನೂ ಸೋಲಿಸಿದರು; ಗ್ರೇಂಜಮೌಥ, ಇಲ್ಲಿಂದ ಖನಿಜಗಳು ಪರದೇಶಕ್ಕೆ ಹೋಗುತ್ತವೆ.

೧೬. ಡಂಬಾರ್ಟನ್-ಡಂಬಾರ್ಟನ್ (ಕ್ಲಾಯಿಡ ಹೊಳೆಯ ದಂಡೆಯ ಮೇಲೆ), ಇಲ್ಲಿರುವ ಕೋಟೆಯಲ್ಲಿಯೇ ವಾಲೇಸನಿರುತ್ತಿದ್ದನು; ಇಲ್ಲಿ ಹಡಗುಗಳನ್ನು ಕಟ್ಟುತ್ತಾರೆ. ಹೆಲೆನ್ಸಬರ್ಗ, ಇದು ಸ್ನಾನದ ಸ್ಥಳವಾಗಿರುತ್ತದೆ. ಕಿರಕಿಂಟಿಲಾಕ್, ಇಲ್ಲಿ ಅರಳೆಯ ಕಾರಖಾನೆಗಳಿರುತ್ತವೆ.

೧೭. ಬ್ಯೂಟ-ರಾಥಸೆ, ಇಂಗ್ಲಂಡದ ಯುವರಾಜನು ಇಲ್ಲಿಯ ಡ್ಯೂಕನಿರುತ್ತಾನೆ. ಬ್ರೋಡಿಕ್ಕ, ಇಲ್ಲಿಯೊಂದು ಕೋಟೆಯಿರುತ್ತದೆ.

೧೮. ಆರ್ಗಾಯಿಲ್–ಗ್ಲೆಂಕೊ, ಇಲ್ಲಿ ಮ್ಯಾಕ್ಡೊನಾಲ್ಡ ಮನೆತನದ ದ್ವೇಷಿಗಳಾದ ಜಾನಡಾಲ್ರಿಂಪಲ್, ಬ್ರೆಡಲ್ಬೇನದ ಅರ್ಲ ಇವರು ಬೇಕೆಂತು ೧೬೯೨ರಲ್ಲಿ ಮ್ಯಾಕ್ಡೊನಾಲ್ಡರ ಕೊಲೆಯನ್ನು ಮಾಡಿಸಿದರು; ಈಕೊಲೆಯಲ್ಲಿ ಒಟ್ಟು ೩೮ ಜನರ ಪ್ರಾಣಹಾನಿಯಾಯಿತು. ಇನ್ವರರಿ, ಇಲ್ಲಿ ಮೀನುಹಿಡಿಯುವ ಕೆಲಸವು ಬಹಳವಾಗಿ ನಡೆಯುತ್ತದೆ. ಡನೂನ, ಓಬನ್ ಇವು ಸ್ನಾನದ ಸ್ಥಳಗಳಿರುತ್ತವೆ. ಟೋಬರಮೊರಿಯು ಬಂದರದ ಸ್ಥಳವಿರುತ್ತದೆ.

೧೯. ಪರ್ಥ–ಪರ್ಥ, ಇದು ದೊಡ್ಡದೂ ಸುಂದರವಾದದ್ದೂ ಬೆಳುವಣಿಗೆ ಹೊಂದಿದ್ದೂ ಇರುತ್ತದೆ; ಇದು ೯೦೦ರಿಂದ ೧ನೆಯ ಜೇಮ್ಸನ ಕೊಲೆಯ ವರೆಗೆ (೧೪೩೭) ಸ್ಕಾಟಲಂಡದ ರಾಜಧಾನಿಯಾಗಿತ್ತು; ಇದರ ನೆರೆಯಲ್ಲಿದ್ದ ಸ್ಕೋನವೆಂಬಲ್ಲಿ ಪೂರ್ವಕಾಲದ ಸ್ಕಾಟಲಂಡದ ಅರಸರ ಪಟ್ಟಾಭಿಷೇಕವಾಗುತ್ತಿತ್ತು; ಇಲ್ಲಿಯೇ ಸ್ಕಾಟ್ಟರು ೨ನೆಯ ಚಾರ್ಲಸನಿಗೆ ಪಟ್ಟಗಟ್ಟಿದರು (೧೬೫೦). ಮೆಥ್ವೆನ್, ಇಲ್ಲಿ ಸ್ಕಾಟಲಂಡದ ಅರಸನಾದ ಬ್ರೂಸನು ಸೋತನು (೧೩೦೬). ಸೆರಿಫಮೂರ, ಇದು ಸ್ಟರ್ಲಿಂಗದ ಈಶಾನ್ಯಕ್ಕೆ ೮ ಮೈಲಿನ ಮೇಲಿರುತ್ತದೆ; ಇಲ್ಲಿ ೧ನೆಯ ಜಾರ್ಜನ ದಳವಾಯಿಯಾದ ಅರ್ಗಾಯಿಲದ ಡ್ಯೂಕನು, ಮೋಸಗಾರನ ಪಕ್ಷದವನಾದ ಮಾರದ ಅರ್ಲನನ್ನು ಸೋಲಿಸಿದನು (೧೭೧೫); ಡಂಕೆಲ್ಡ, ಇಲ್ಲಿಯೊಂದು ಹಳೆಯಗುಡಿಯಿರುತ್ತದೆ. ಕಿಲ್ಲಿಕ್ರಾಂಕಿ,

ಇವರ ಕಣಿವಿಯಲ್ಲಿ ಕ್ಲೆವರಹೌಸನು ಕಾಳಗದಲ್ಲಿ ಮಡಿದನು (೧೬೮೯). ಡನ್‌ಬ್ಲೇನ ಇಲ್ಲಿಯೊಂದು ಪಳೆಯ ಗುಡಿಯಿರುತ್ತದೆ.

೨೦. ಫೋರಫಾರ—ಫೋರಫಾರ, ಇಲ್ಲಿ ನಾರುಬಟ್ಟೆಗಳಾಗುತ್ತವೆ. ಡಂಡಿ, ಇದು ಸ್ಕಾಟಲಂಡದಲ್ಲಿ ೩ನೆಯ ದೊಡ್ಡ ಪಟ್ಟಣವು; ಇಲ್ಲಿ ವ್ಯಾಪಾರವು ಬಪಳ ನಡೆಯುತ್ತದೆ; ಇಲ್ಲಿ ನಾರುಬಟ್ಟೆಯ ಕಾರಖಾನೆಗಳೂ ಕಬ್ಬಿಣಹೊಯ್ಯುವ ಯಂತ್ರಗಳೂ ಪಡಗುಕಟ್ಟುವ ಕಾರಖಾನೆಗಳೂ ಇರುತ್ತವೆ. ಅಬ್ರೋರ್ಥ, ಇಲ್ಲಿಯೊಂದು ಪಳೆಯದಾದ ದೊಡ್ಡ ಗುಡಿಯಿರುತ್ತದೆ; ಇಲ್ಲಿಂದ ಹಾಸಿಗೆಗಲ್ಲುಗಳು ಪರವೂರಿಗೆ ಹೋಗುತ್ತವೆ; ಇಲ್ಲಿಯಾದರೂ ನಾರುಬಟ್ಟೆಗಳಾಗುತ್ತವೆ. ಬ್ರೇಚಿನ್, ಇಲ್ಲಿಯೊಂದು ಬುನಾದಿಯ ಗುಡಿಯಿರುತ್ತದೆ.

## ದಕ್ಷಿಣದಲ್ಲಿ.

೨೧. ಎಡಿನ್ಬರೋ—ಎಡಿನ್ಬರೋ, ಈ ಸುಂದರವಾದ ಪಟ್ಟಣವು ಸ್ಕಾಟಲಂಡದ ರಾಜಧಾನಿಯಾಗಿರುತ್ತದೆ; ಇದರಲ್ಲಿ ಹಳೆಯೂರು ಹೊಸವೂರು ಎಂಬ ೨ ಭಾಗಗಳಿವೆ; ಹಳೆಯೂರಲ್ಲಿ ಒಂದು ಮುಂಚಿನ ಕಾಲದ ಕೋಟೆಯೂ ಸ್ಕಾಟಲಂಡದ ಅರಸರ ವಾಸಸ್ಥಾನವಾದ ಹೋಲಿರೂಡವೆಂಬ ಅರಮನೆಯೂ ಇರುತ್ತವೆ; ಇದರ ಆಗ್ನೇಯಕ್ಕೆ ಆರ್ಥರನಗದ್ದಿಗೆಯೆಂಬದೊಂದು ಬಂಡೆಯಿರುತ್ತದೆ; ಅದು ಸಮುದ್ರದ ಸಪಾಟಿನ ಮೇಲೆ ೩೨೨ ಅಡಿಯೆತ್ತರವಿರು

 

ತ್ತದೆ; ಇದು ಫೋರ್ಥ ಹೊಳೆಯ ದಂಡೆಯ ಮೇಲಿ
ದೆ; ಇಲ್ಲಿಯೊಂದು ವಿಶ್ವವಿದ್ಯಾಲಯವುಂಟು; ಇಲ್ಲಿ
ಸ್ಟುವರ್ಟ ಮೇರಿಯು ಕ್ಯಾಥೋಲಿಕ್ ಮತದಂತೆ
ತನ್ನ ದೇವರ ಸ್ತುತಿಯನ್ನು ಮಾಡಿಸ ತೊಡಗಿದಳು.
ಲೀಥ, ಇದು ಎಡಿನ್ಬರೋದಿಂದ ೨ ಮೈಲಿನಮೇ
ಲೊಂದು ಬಂದರವಿರುತ್ತದೆ; ಇದು ಫೋರ್ಥ ಹೊಳೆ
ಯ ದಂಡೆಯಲ್ಲುಂಟು; ಇದರ ಮೂಡಣಿಗಿದ್ದ ನ್ಯೂ
ಹೇವನ್, ಗ್ರ್ಯಾಂಟನ್ನೆಂಬ ಊರುಗಳೂ ಪಶ್ಚಿಮ
ಕ್ಕಿದ್ದ ಪೋರ್ಟಬೆಲೊ, ಮಸಲ್ಬರ್ಗ ಎಂಬ ಊ
ರುಗಳೂ ಮೀನುಹಿಡಿಯುವ ಸ್ಥಳಗಳಿದ್ದದ್ದರಿಂದ
ವ್ಯಾಪಾರದ ಬಗ್ಗೆ ಹೆಸರಾಗಿವೆ. ಮಸಲ್ಬರ್ಗದ ಸರೆ
ಯಲ್ಲಿ ಎಸ್ಕ ಹೊಳೆಯ ದಂಡೆಯಲ್ಲಿದ್ದ ಪಿಂಕಿಯು
ಎಡಿನ್ಬರೋದ ಮೂಡಣಿಗೆ ೫ ಮೈಲಿನ ಮೇಲೆ
ಇರುತ್ತದೆ; ಇಲ್ಲಿ ೬ನೆಯ ಎಡ್ವರ್ಡನ ದಳವಾಯಿ
ಯಾದ ಸಾಮರಸೆಟ್ಟನು ಸ್ಕಾಟ್ಟರನ್ನು ಸೋಲಿಸಿದ
ನು (೧೫೪೭). ಪೋರ್ಟಬೆಲೊ (ಟ್ವೈನ ಹೊಳೆಯ
ದಂಡೆಯ ಮೇಲೆ), ಇದು ಸ್ನಾನದ ಸ್ಥಳವಿರುತ್ತದೆ.
ಡಾಲ್ಕೈಥ್, ಇಲ್ಲಿ ಹಳೆಯ ತರದ ಗುಡಿಗಳಿರುತ್ತವೆ.

೨೨. ಹೆಡಿಂಗ್ಟನ್—ಡನ್ಬಾರ, ಇಲ್ಲಿ ಆಲಿವ್ಹರ ಕ್ರಾಮವೆ
ಲ್ಲನು ಡೇವ್ಹಿಡ ಲೆಸ್ಲಿಯ ಕಯ್ಕೆಳಗಿದ್ದ ಸ್ಕಾಟ್ಟರ
ನ್ನು ಸೋಲಿಸಿದನು (೧೬೫೦); ಮತ್ತು ಇಲ್ಲಿಯೇ
೧ನೆಯ ಎಡ್ವರ್ಡನು ಬೇಲಿಯಲ್ಲನನ್ನು ಸೋಲಿಸಿ
ದನು(೧೨೯೬). ಪ್ರೆಸ್ಟನ್ನಪ್ಯಾನ್ಸ, ಇದು ಎಡಿನ್ಬ
ರೋದಿಂದ ೮½ ಮೈಲಿನ ಮೇಲಿರುತ್ತದೆ; ಇಲ್ಲಿ ಚಿ

ಕ್ಕಮೋಸಗಾರನಾದ ಚಾರ್ಲಸ ಎಡ್ವರ್ಡನು ಜಾನ ಕೋಪದೊರೆಯನ್ನು ಸೋಲಿಸಿದನು (೧೭೪೫).

೨೩. ಬರ್ವಿಕ್ (ಮರ್ಸ)-ಹ್ಯಾಲಿಡಾನ್‌ಮರಡಿ, ಇದು ಬರ್ವಿಕ್ಕದ ವಾಯುವ್ಯಕ್ಕೆ ೨ ಮೈಲಿನ ಮೇಲಿರುತ್ತದೆ; ಇಲ್ಲಿ ೩ನೆಯ ಎಡ್ವರ್ಡನು ಸ್ಕಾಟ್ಟರನ್ನು ಸೋಲಿಸಿದನು (೧೩೩೩). ಬರ್ವಿಕ್, ಇದು ಟ್ವೀಡ ಹೊಳೆಯದಂಡೆಯ ಮೇಲದೆ.

೨೪. ರಾಕ್ಸಬರ್ಗ-ಎಂಕ್ರುಮ್ಮೂರ, ಇಲ್ಲಿ ಅಂಗಸದ ಅರ್ಲನು ಇಂಗ್ಲಿಷರನ್ನು ಸೋಲಿಸಿದನು (೧೫೪೫). ಮೆಲ್ರೋಜ, ಇಲ್ಲಿಯೊಂದು ಪೂರ್ವಕಾಲದ ಮಠಕಗುಡಿಯಿರುತ್ತದೆ. ಅಬ್ಬಾಟ್ಸಫೋರ್ಡ, ಇದು ವಾಲ್ಟರ ಸ್ಕಾಟ್ಟದೊರೆಯ ವಾಸಸ್ಥಾನವಾಗಿತ್ತು.

೨೫. ಡಂಫ್ರೀಜ-ಡಂಫ್ರೀಜ, ಇಲ್ಲಿ ಕುರಿದನಗಳ ವ್ಯಾಪಾರವು ಬಹಳವಾಗಿ ಆಗುತ್ತದೆ. ಮೋಫಾಟ್, ಇಲ್ಲಿ ಆರೋಗ್ಯಕರವಾದ ನೀರಿನಬುಗ್ಗೆಗಳಿರುತ್ತವೆ.

೨೬. ಕರ್ಕಡ್ಡಬ್ರಾಯಿಟ-ಕರ್ಕಡ್ಡಬ್ರಾಯಿಟ, ಇದು ಈಪರಗಣೆಯ ಮುಖ್ಯಪಟ್ಟಣವು.

೨೭. ವಿಗ್‌ಟಾನ-ಪೋರ್ಟಪ್ಯಾಟ್ರಿಕ್ಕ, ಇದಕ್ಕೂ ಅಯರ್ಲಂಡದಲ್ಲಿದ್ದ ಡೊನಾಘಡಿಗೂ ೨೨ ಮೈಲು ಅಂತರವದೆ.

೨೮. ಏಯರ-ಏಯರ, ಇಲ್ಲಿ ಬಹಳ ವ್ಯಾಪಾರವಾಗುತ್ತದೆ; ಇದರ ನೆರೆಯಲ್ಲಿ ರಾಬರ್ಟ ಬರ್ನನು ಹುಟ್ಟಿದನು. ಕಿಲ್ಮರ್ನಾಕ್ಕ, ಇಲ್ಲಿ ಬಹಳ ಉಣ್ಣೆಯ ಕಾರಖಾನೆಗಳಿರುತ್ತವೆ. ಆಡ್ರಾಸನ್, ಸಾಲ್ಟಕೋಟ್ಸ, ಟ್ರೂನ ಇವು ಬಂದರಗಳಿರುತ್ತವೆ.

೨೯. ರೆನ್ಫ್ರು—ಪೇಜಲಿ ಇದು ಗ್ಲಾಸಗೋದಿಂದ ೭ ಮೈಲಿನ ಮೇಲೆ ದೊಡ್ಡ ವ್ಯಾಪಾರದ ಸ್ಥಳವಿರುತ್ತದೆ. ಪೋರ್ಟಗ್ಲಾಸಗೊ, ಇಲ್ಲಿಂದ ಪರದೇಶಗಳಿಗೆ ಬಹಳ ಸರಕುಗಳು ರಫ್ತಾಗುತ್ತವೆ. ಗ್ರೀನಾಕ್ (ಕ್ಲೈಡಹೊಳೆಯ ಮೇಲೆ), ಇಲ್ಲಿ ಹಡಗುಕಟ್ಟುವ ಕೆಲಸವೂ ಸಕ್ಕರೆಯ ಶೋಧಿಸುವ ಕೆಲಸವೂ ನಡೆಯುತ್ತವೆ; ಉಗೆಯಂತ್ರವ ಹುಡುಕಿ ತೆಗೆದ ಜೇಮ್ಸ ವಾಟ್ಟನು ಇಲ್ಲಿಯೇ ಹುಟ್ಟಿದನು.

೩೦. ಲೆನಾರ್ಕ—ಗ್ಲಾಸಗೋ ( ಕ್ಲೈಡದ ಮೇಲೆ ), ಇದು ಜನಸಂಖ್ಯೆ, ಕಬ್ಬಿಣವ್ಯಾಪಾರ, ಅರಳೆಯ ಕಾರಖಾನೆ, ವಿಶ್ವವಿದ್ಯಾಲಯ, ಸಂಪತ್ತು ಇವುಗಳ ಬಗ್ಗೆ ೨ನೆಯ ಪಟ್ಟಣವಿರುತ್ತದೆ. ಇದರ ಜನಸಂಖ್ಯೆ ೬೮,೭೪,೦೦೦; ಇದರ ತೆಂಕಣಿಗೆ ಲ್ಯಾಂಗಸಾಯಿಡ, ಇಲ್ಲಿ ಸ್ಕಾಟಲಂಡದ ರಾಣಿಯಾದ ಮೇರಿಯ ಪಕ್ಷದವರು ಸೋತರು (೧೫೬೮). ಏರಡ್ರಿ, ಇಲ್ಲಿ ಅರಳೆಕಲ್ಲಿದ್ದಲಿಕಬ್ಬಿಣಗಳ ಕಾರಖಾನೆಗಳಿರುತ್ತವೆ. ಬಾಥವೆಲ್ಲಬ್ರಿಜ್ಜ, ಇಲ್ಲಿ ಅರಸಿನ ದಂಡಿಗೂ ಕೆಲವು ಧರ್ಮಸಂಬಂಧದ ಬಂಡುಗಾರರಿಗೂ ಒಂದು ದೊಡ್ಡ ಜಗಳವಾಯಿತು (೧೬೭೯).

೩೧. ಲಿನ್‌ಲಿಥಗೋ—ಲಿನ್‌ಲಿಥಗೊ, ಇಲ್ಲಿಯೊಂದು ಹಳೆಯರಮನೆಯಿದೆ; ಇಲ್ಲಿಯೇ ಸ್ಕಾಟಲಂಡದ ರಾಣಿಯಾದ ಮೇರಿಯು ೧೫೪೨ರಲ್ಲಿ ಹುಟ್ಟಿದಳು. ಬೊನೆಸ್ಸ, ಇಲ್ಲಿ ಕಲ್ಲಿದ್ದಲಿಕಬ್ಬಿಣಗಳ ವ್ಯಾಪಾರವಾಗುತ್ತದೆ. ಬಾಥಗೇಟ, ಇಲ್ಲಿ ಕಬ್ಬಿಣದ ಕಾರಖಾನೆಗಳಿರುತ್ತವೆ.

೩೨. ಪೀಬಲ್ಸ—ಪೀಬಲ್ಸ (ಟ್ವೀಡ ಹೊಳೆಯ ದಂಡೆಯ ಲ್ಲಿ), ಇಲ್ಲಿಗೆ ಬೇಸಿಗೆಯಲ್ಲಿ ಪರಸ್ಥಳದವರು ಬರುತ್ತಾರೆ. ಇನ್ನರಲೀದನ್, ಇಲ್ಲಿಯ ನೀರು ಆರೋಗ್ಯಕರವೆಂದು ಬಹಳ ಜನರು ಮೊದಲು ಇಲ್ಲಿಗೆ ಬರುತ್ತಿದ್ದರು.

೩೩. ಸೆಲ್ಕರ್ಕ—ಸೆಲ್ಕರ್ಕ (ಎಟ್ರಿಕ್ಕ ಹೊಳೆಯ ಮೇಲೆ), ಇಲ್ಲಿ ಗೆರೆಗೆರೆಯುಳ್ಳ ತೊಗಲಿನ ಅರಿವೆಗಳಾಗುತ್ತವೆ. ಫಿಲಿಫೊಗ, ಇಲ್ಲಿ ಮೊಂಟರೋಜದ ಅರ್ಲನು ಸೋತನು (೧೬೪೫). ಗಾಲಾಸೀಲ್ಸ (ಟ್ವೀಡ ಹೊಳೆಯ ಮೇಲೆ), ಇಲ್ಲಿ ಉಣ್ಣೆಯ ತರತರದ ಅರಿವೆಗಳಾಗುತ್ತವೆ.

## ನಡುಗಡ್ಡೆಗಳು.

ಸ್ಕಾಟಲಂಡದ ಸುತ್ತುಮುತ್ತು ೭೦೦ಕ್ಕಿಂತ ಹೆಚ್ಚು ನಡುಗಡ್ಡೆಗಳುಂಟು; ಈಯೆಲ್ಲ ನಡುಗಡ್ಡೆಗಳ ಒಟ್ಟು ಕ್ಷೇತ್ರಫಲ ೩೭೦೦ ಚೌಕು ಮೈಲು. ಇವುಗಳಲ್ಲಿ ಆಯ್ದು ಮುಖ್ಯವಾದ ಗುಂಪುಗಳನ್ನು ಮಾಡಿರುತ್ತಾರೆ. ಅವಾವವೆಂದರೆ,—

೧. ಸೆಂಟ್ಲಂಡ ನಡುಗಡ್ಡೆಗಳು—ಇವು ಸ್ಕಾಟಲಂಡದ ಇಶಾನ್ಯಕ್ಕೆ ೧೦೦ ದ್ವೀಪಗಳಿರುತ್ತವೆ. ಇವುಗಳಲ್ಲಿ ೨೪ರಲ್ಲಿ ಮಾತ್ರ ಜನರ ವಸ್ತಿಯಿರುತ್ತದೆ. ಇವುಗಳಲ್ಲಿ ಮೇನಲಂಡ, ಎಲ್, ಅನಸ್ಟ ಇವು ಮುಖ್ಯವಾದವು. ಇವುಗಳ ಮುಖ್ಯಪಟ್ಟಣ ಲರ್ವಿಕ್.

೨. ಆರ್ಕನಿ ನಡುಗಡ್ಡೆಗಳು—ಇವು ೬೭ ಇರುತ್ತವೆ. ಇವುಗಳಲ್ಲಿ ೨೯ರಲ್ಲಿ ಜನರ ವಸ್ತಿಯಿರುತ್ತದೆ. ಇವುಗಳಲ್ಲಿ ಪೊಮೋನಾ, ಹೊಯ್ ಇವು ಮುಖ್ಯವಾದವು.

೩. ಪಶ್ಚಿಮ ನಡುಗಡ್ಡೆಗಳು (ಹೆಬ್ರಿಡೀಜ)—ಇವು ೧೬೦ ಇರುತ್ತವೆ. ಇವುಗಳಲ್ಲಿ ೭೦ರಲ್ಲಿ ಜನರ ವಸ್ತಿಯಿರುತ್ತದೆ. ಇವುಗಳಲ್ಲಿ ಹೊರಗಿನ ಹೆಬ್ರಿಡೀಜ, ಒಳಗಿನ ಹೆಬ್ರಿಡೀಜ ಎಂಬೆರಡು ಭಾಗಗಳುಂಟು.

(ಅ) ಒಳಗಿನ ಹೆಬ್ರಿಡೀಜ—ಸ್ಕಾಯಿ, ರಮ್, ಮೆಲ್, ಜೂರಾ, ಅಯೋನಾ. *

(ಬ) ಹೊರಗಿನ ಹೆಬ್ರಿಡೀಜ—ಲುಯಿ, ಹ್ಯಾರಿಸ, ಖಾರಾ, ಬೆನ್ನಬಿಕುಲಾ, ತೆಂಕಣ ಯುಯಿಸ್ಟ, ಬಡಗಣ ಯುಯಿಸ್ಟ ಮುಂತಾದವು.

೪. ಕ್ಲೈಡ ಅಖಾತದಲ್ಲಿದ್ದ ನಡುಗಡ್ಡೆಗಳು—ಅರನ್ನ, ಬ್ಯೂಟ, ಕೆಂಬ್ರಿಜ, ಎಲ್ಸಾಗ್ರೇಕ ಮುಖ್ಯವಾದವು.

೫. ಸಣ್ಣಸಣ್ಣ ನಡುಗಡ್ಡೆಗಳ ಗುಂಪು—ಸ್ಕಾಟಲಂಡದ ಪೂರ್ವಕ್ಕಿರುತ್ತದೆ. ಇವುಗಳಲ್ಲಿ ಮಾನ್ ಆಫ ಅಯಿಲ್, ಬೆಲರಾಕ್ ಇವು ಮುಖ್ಯವಾದವು.

## ಅಖಾತಗಳೂ ಉಪಸಾಗರಗಳೂ.

೧. ಡನೆಟ್ಟ ಉತ್ತರದಲ್ಲಿ.

೨. ಕ್ರಾಮರ್ಟಿ
೩. ಮೊರೆ
೪. ಫೋರ್ಥ †
೫. ಟೇ.
} ಪೂರ್ವದಲ್ಲಿ .

* ಇಲ್ಲಿ ಹಳೆಯ ಗುಡಿಗಳಿರುತ್ತವೆ.

† ಫೋರ್ಥದಿಂದ ಕ್ಲೈಡದ ವರೆಗೆ ಅಂಟೋನಿಯಗೋಡೆ ಎಂಬ ಗೋಡೆಯನ್ನು ರೋಮಾಯರು ಕಟ್ಟಿಸಿದರು (ಕ್ರಿ. ಶ. ೧೪೦).

೬. ಗ್ಲೆನ್ನಲ್ಯೂಸ
೭. ಸಾಲ್ವೆ
೮. ವಿಗ್‌ಟೌನ್ } ದಕ್ಷಿಣದಲ್ಲಿ.

೯. ಲಾಕ್ಲಾಂಗ
೧೦. ಕ್ಲೈಡ
೧೧. ಲಾಕ್ಫಾಯಿನ್
೧೨. ಲಾಕ್ರಾಯಿನ್
೧೩. ಲಾಕ್‌ಲಿನ್‌ಹೆ
೧೪. ಲಾಕ್‌ಬ್ರೂಮ } ಪಶ್ಚಿಮದಲ್ಲಿ

## ಸಾಮುದ್ರಧುನಿಗಳು.

೧. ಪೆಟ್ಲಂಡಫರ್ಥವು–ಆರ್ಕನಿ ಸ್ಕಾಟಲಂಡಗಳ ನಡುವೆ
೨. ಸ್ಲೀಟವು–ಸ್ಕಾಯಿ ಸ್ಕಾಟಲಂಡಗಳ ನಡುವೆ.
೩. ಮಲ್ಲವು–ಮಲ್ ಸ್ಕಾಟಲಂಡಗಳ ನಡುವೆ.
೪. ಜೂರಾ–ಇದು ಜೂರಾ ಸ್ಕಾಟಲಂಡಗಳ ನಡುವೆ.
೫. ಬಡಗಣಮಿಂಚವು–ಲುಯಿ ಸ್ಕಾಟಲಂಡಗಳ ನಡುವೆ.
೬. ಚಿಕ್ಕಮಿಂಚವು–ಹೊರಗಿನ ಹೆಬ್ರಿಡೀಜ ಸ್ಕಾಯಿಗಳ ನಡುವೆ.
೭. ಆಯಲೆಯು–ಜೂರಾ ಆಯಲೆ ಇವುಗಳ ನಡುವೆ.
೮. ಬಡಗಣಕೊಲ್ಲೆ–ಅಯರ್ಲಂಡ ಸ್ಕಾಟಲಂಡಗಳ ನಡುವೆ.

## ಭೂಶಿರಗಳು.

೧. ಡಂಕನ್ಸಬಿಹೆಡ್
೨. ಡನೆಟ್‌ಹೆಡ್ } ಕೇಥ್ನೆಸ್ಸದ ಉತ್ತರದಲ್ಲಿ.

೩. ಕೇಪರಾಥ–ಸದರ್ಲಂಡದಲ್ಲಿ.
೪. ಸೆಂಟ ಆಬ್ಸಹೆಡ್–ಬರ್ವಿಕ್ಕದಲ್ಲಿ.

೫. ಬಾರೊಹೆಡ್
೬. ಮಲ್ ಆಫ ಗ್ಯಾಲೊವೆ } ವಿಗ್‌ಟೌನದಲ್ಲ.

೭. ಫಾಯಫನೆಸ್–ಫಾಯಫದಲ್ಲಿ.

೮. ಕಿನ್ನೇರ್ಡ್ಸ್ ಹೆಡ್
೯. ಬ್ಯೂಕನ್ನೆಸ್ } ಅಬರ್ಡೀನ ಪರಗಣೆಯಲ್ಲಿ.

೧೦. ಟಾರ್ಬೆಟ್ ನೆಸ್—ರಾಸ ಪರಗಣೆಯಲ್ಲಿ.

೧೧. ಮಲ್ ಆಫ್ ಕೆಂಟಾಯರ—ಅರ್ಗಾಯಿಲದ ನೈ ರುತ್ಯಕ್ಕೆ.

೧೨. ಬಡನ್ನೆಸ್ಸ—ಫ್ರೋರಫಾರ ಪರಗಣೆಯಲ್ಲಿ.

೧೩. ಅರ್ಡ್ನಾರ್ವಮುರ್ಕನ್ನ—ಅರ್ಗಾಯಿಲದ ವಾಯುವ್ಯಕ್ಕೆ.

೧೪. ಬಟ್ಟ ಆಫ ಲುಯಿಸ—ಲುಯಿ ನಡುಗಡ್ಡೆಯ ಉತ್ತರದಲ್ಲಿ.

## ಪರ್ವತಗಳು.

ಸ್ಕಾಟಲಂಡದಲ್ಲಿ ಪರ್ವತಗಳು ಬಹಳ; ಅವುಗಳಲ್ಲಿ ಮುಖ್ಯವಾದವುಗಳಾವವೆಂದರೆ,—

೧. ಗ್ರ್ಯಾಂಪಿಯನ್ನದ ಗುಡ್ಡದ ಸಾಲು—ಇನ್ವರ್ನೆಸ್ಸದ ನೈರುತ್ಯದಲ್ಲಿರುವ ಬೆನ್ನೇವ್ಹಿಸದಿಂದ ಅಬರ್ಡೀನದ ಪೂರ್ವದ ದಂಡೆಯ ವರೆಗೆ ಹಬ್ಬಿರುತ್ತದೆ. ಇದರಲ್ಲಿ ಬೆನ್ನೀವ್ಸ, ಬೆನ್‌ಲೋಮಂಡ, ಮ್ಯಾಕ್‌ಧುಯಿ ಮುಂತಾದ ಉನ್ನತಶಿಖರಗಳುಂಟು.

೨. ಚೇವಿಯಟ್ಟ ಗುಡ್ಡಗಳು—ರಾಕ್ಸಬರ್ಗ, ನಾರ್ಥಂಬರ್ಲಂಡಗಳ ನಡುವೆ.

೩. ಲ್ಯಾಮರಮೂರ—ಹೆಡಿಂಗ್ಟನ್ ಬರ್ವಿಕ ಪರಗಣೆಗಳ ನಡುವೆ.

೪. ಪೆಟ್ಲಂಡ—ಎಡಿನ್ಬರೊ ಪರಗಣೆಯಲ್ಲಿ.

೫. ಆಕಿಲ್ ಗುಡ್ಡಗಳು—ಪರ್ಥ ಫಾಯಿಫ ಪರಗಣೆಗಳ ನಡುವೆ.

## ಹೊಳೆಗಳು.

೧. ಟ್ವೀಡ—ಇದು ಲೋದರ್ನದಲ್ಲಿ ಹುಟ್ಟಿ ಜರ್ಮನ್ ಸಮುದ್ರಕ್ಕೆ ಕೂಡುತ್ತದೆ; ಇದರ ಉದ್ದಳತೆ ೯೬ ಮೈಲು. ಇದರಲ್ಲಿ ಹಳದಿಯ ಬಣ್ಣದ ಮೀನುಗಳು ದೊರೆಯುತ್ತವೆ. ಇದರೊಳಗೆ ಬರ್ವಿಕ್ಕದ ವರೆಗೆ ಹಡಗುಗಳು ಬರುತ್ತವೆ.

೨. ಫೋರ್ಥ—ಇದು ಬೆನ್‌ಲೋಮಂಡದಲ್ಲಿ ಹುಟ್ಟಿ ಫೋರ್ಥ ಅಖಾತಕ್ಕೆ ಕೂಡುತ್ತದೆ. ಇದರ ಉದ್ದಳತೆ ೬೦ ಮೈಲು.

೩. ಟೇ—ಇದು ಸ್ಕಾಟಲಂಡದಲ್ಲಿ ಎಲ್ಲಕ್ಕೂ ದೊಡ್ಡ ಹೊಳೆಯು. ಇದರ ಉದ್ದಳತೆ ೧೦೫ ಮೈಲು. ಇದರಲ್ಲಿ ಪರ್ಥದ ವರೆಗೆ ಹಡಗುಗಳು ನಡೆಯುತ್ತವೆ.

೪. ಕ್ಲೈಡ—ಇದು ಲೋದರ್ನದಲ್ಲಿ ಹುಟ್ಟಿ ಕ್ಲೈಡದ ಅಖಾತಿಗೆ ಕೂಡುತ್ತದೆ. ಇದರ ಉದ್ದಳತೆ ೯೮ ಮೈಲು. ಲಾನರ್ಕದ ಹತ್ತರ ಈ ಹೊಳೆಯ ಹೆಸರಾದ ಕಡಸಲಗಳಿರುತ್ತವೆ. ಇದರಲ್ಲಿ ಗ್ಲಾಸಗೋದವರೆಗೆ ದೊಡ್ಡ ಹಡಗುಗಳು ನಡೆಯುತ್ತವೆ.

೫. ಡೀ—ಇದು ಕೇರ್ನಗೋರ್ಮದಲ್ಲಿ ಹುಟ್ಟಿ ಅಟ್ಲಾಂಟಿಕ ಮಹಾಸಾಗರಕ್ಕೆ ಕೂಡುತ್ತದೆ. ಇದರ ಉದ್ದಳತೆ ೮೭ ಮೈಲು.

೬. ಸ್ಪೆ—ಇದು ಇನ್‌ವ್ಹರ್ನೆಸ್ಸದಲ್ಲಿ ಹುಟ್ಟಿ ಅಟ್ಲಾಂಟಿಕ ಮಹಾಸಾಗರಕ್ಕೆ ಕೂಡುತ್ತದೆ. ಈ ಹೊಳೆಯ ಸೆಳವು ಬಹಳ. ಇದರಲ್ಲಿ ಹಡಗುಗಳು ನಡೆಯುವದಿಲ್ಲ. ಇದರ ಉದ್ದಳತೆ ೯೬ ಮೈಲು.

## ಸರೋವರಗಳು.

ಸ್ಕಾಟಲಂಡದಲ್ಲಿ ವಿಶೇಷವಾಗಿ ಅದರ ಪಿರ್ನಾಡಿನಲ್ಲಿ ಬಹಳ ಸರೋವರಗಳಿರುತ್ತವೆ. ಅವುಗಳಲ್ಲಿ ಮುಖ್ಯವಾ ದವುಗಳಾವವೆಂದರೆ:—

೧. ಲಾಕ್ಲೋಮಂಡ—ಇದು ಗ್ರೇಟಬ್ರಿಟನ್ನದಲ್ಲಿ ಎಲ್ಲ ಕ್ಕೂ ದೊಡ್ಡ ಸರೋವರವು. ಇದು ೨೪ ಮೈಲು ಉದ್ದ ೭ ಮೈಲು ಅಗಲವಿರುತ್ತದೆ. ಇದರ ಕ್ಷೇತ್ರ ಫಲವು ೪೫ ಚಚ್ಚೌಕು ಮೈಲು. ಇದರಲ್ಲಿ ಸುಮಾ ರು ೩೦ ನಡುಗಡ್ಡೆಗಳಿರುತ್ತವೆ.

೨. ಲಾಕ್ಕ್ಯಾಟ್ರಾಯಿನ—ಇದು ೯ ಮೈಲುದ್ದ ೩ ಮೈಲು ಅಗಲವಿರುತ್ತದೆ. ವಾಲ್ಟರ ಸ್ಕಾಟ್ಟದೊರೆಯು ತನ್ನ ಕಾವ್ಯದಲ್ಲಿ ಈರಮ್ಯವಾದೆಡೆಯನ್ನು ಬಣ್ಣಿಸಿರು ತ್ತಾನೆ.

೩. ಲಾಕಾ—ಇದು ೨೩ ಮೈಲುದ್ದ ೧೩ ಮೈಲು ಅಗಲವಿ ರುತ್ತದೆ. ಇದರ ಸುತ್ತಲೂ ಎತ್ತರವಾದ ಗುಡ್ಡಗ ಳಿರುತ್ತವೆ. ಇದು ಸ್ಕಾಟಲಂಡದಲ್ಲಿ ಅತಿರಮಣೀಯ ವಾದ ಸರೋವರವು.



# ಅಯರ್ಲಂಡದೇಶ.

ಮೇರೆಗಳು—ಬಡಗಣ ಪಡುವಣ ತೆಂಕಣ ದಿಕ್ಕುಗಳಲ್ಲಿ ಅಟ್ಲಾಂಟಿಕ ಮಹಾಸಾಗರವು; ಪೂರ್ವಕ್ಕೆ ಸೆಂಟ ಜಾರ್ಜ ಕೊಲ್ಲಿಯೂ ಅಯರಿಶ್ ಸಮುದ್ರವೂ.

ಅಯರ್ಲಂಡ ದೇಶದ ತೀರ ಬಡಗಣ ಬಿಂದುವು ಮಾಲಿನ್‌ಹೆಡ್ಡವು ( ಅಕ್ಷಾಂಶ ೫೫° ೨೦' ); ಈ ದೇಶದ ತೀರ ತೆಂಕಣ ಬಿಂದುವು ಮಿರಝುನ್‌ಹೆಡ್ಡವು ( ಅಕ್ಷಾಂಶ ೫೧° ೨೬' ). ಈ ದೇಶದ ಉತ್ತರ ದಕ್ಷಿಣ ಉದ್ದಳತೆ ೨೯೦ ಮೈಲು. ಅಯರ್ಲಂಡದ ತೀರ ಪಡುವಣ ಬಿಂದುವು ಡನ್ಮೋರಹೆಡ್ಡವು ( ರೇಖಾಂಶ ೧೦° ೨೯'); ಇದರ ತೀರ ಮೂಡಣ ಬಿಂದುವು ಡೌನ ಪರಗಣೆಯ ದಂಡೆಯು (ರೇಖಾಂಶ ೧೦° ೨೯' ). ಈ ದೇಶದ ಒಟ್ಟು ಅಗಲಳತೆಯು ೧೭೫ ಮೈಲು. ಇಂಗ್ಲಂಡದ ತೀರ ಮೂಡಣ ಬಿಂದುವಾದ ಲೊವೆಸ್ಟಾಫ್ಟದಿಂದ ಡನ್ಮೋರಹೆಡ್ಡವು ೫೨೦ ಮೈಲು ದೂರವಾಗಿರುತ್ತದೆ.

ಆಯರ್ಲಂಡದ ಕ್ಷೇತ್ರಫಲ ೩೨,೫೩೧ ಚಚ್ಚೌಕು ಮೈಲು; ಜನಸಂಖ್ಯೆ ೫೧,೭೪೮೩೬. ಅಯರ್ಲಂಡದ ಮೂಲ ಹೆಸರುಏರಿನ್. ರೋಮಾಯರು ಇದನ್ನು ಹಿಬರ್ನಿಯಾ ಎಂದು ಕರೆಯುತ್ತಿದ್ದರು; ಫಿನೀಸಿಯರು ಆಯರ್ಣೆಯೆಂದು ಕರೆಯುತ್ತಿದ್ದರು. ಪೂರ್ವಕಾಲದಲ್ಲಿ ಇದರ ಪಸುರುಬಣ್ಣ ಕ್ಕೋಸ್ಕರ ಇದಕ್ಕೆ ಪಚ್ಚದ ನಡುಗಡ್ಡೆಯೆನ್ನುತ್ತಿದ್ದರು. ಈ ದೇಶದಲ್ಲಿ ೧ ಚಚ್ಚೌಕ ಮೈಲಿಗೆ ಸುಮಾರು ೨೫೦ ಜನರಿರುತ್ತಾರೆ.

ಅಯರ್ಲಂಡದ ಹವೆಯು ಇಂಗ್ಲಂಡಕ್ಕಿಂತ ಹೆಚ್ಚು ತೇವವುಳ್ಳದ್ದು. ವರ್ಷಕ್ಕೆ ಸರಾಸರಿ ಕಾರ್ಕದಲ್ಲಿ ೪೦ ಇಂಚು ಮಳೆಯೂ, ಡಬ್ಲಿನ್ನದಲ್ಲಿ ೩೧ ಇಂಚು ಮಳೆಯೂ ಬೀಳುತ್ತದೆ. ಇಲ್ಲಿ ಹಾವುಗಳಿಲ್ಲ.

೨ನೆಯ ಹೇನ್ರಿಯು ೧೧೭೨ರಲ್ಲಿ ಅಯರ್ಲಂಡವನ್ನು ಗೆದ್ದನು. ಇಂಗ್ಲಂಡ ಅಯರ್ಲಂಡ ದೇಶಗಳ ಪ್ರಜಾಸಭೆಗಳು ೧೮೦೧ ಜನವರಿ ೧ನೆಯ ತಾರೀಖಿನ ದಿವಸ ಒಟ್ಟುಗೂಡಿಸಲ್ಪಟ್ಟವು. ೧೮೩೨ರಲ್ಲಿ ಅಯರ್ಲಂಡದ ಶಿಕ್ಷಣದ ಕಾನೂನಾಯಿತು.

ಅಯರ್ಲಂಡ ಸ್ಕಾಟಲಂಡ ವೇಲ್ಸ ದೇಶಗಳ ಜನರು ಕೆಲ್ಟಿಕ್ ಕುಲದವರಿರುತ್ತಾರೆ. ಅಲ್ಸ್ಟರ ಪರಗಣೆಯಲ್ಲಿ ಮಾತ್ರ ಅಂಗ್ಲೋಸ್ಯಾಕ್ಸನ್ನರು ಬಕ್ಕಲಾಗಿರುತ್ತಾರೆ. ಅಯರ್ಲಂಡದವರು ಅರ್ಸವೆಂಬ ನುಡಿಯನ್ನಾಡುತ್ತಾರೆ.

ಹೋರೆಗಳು—ಈದೇಶದಲ್ಲಿ ಬಹಳ ಜನರು ಕೃಷಿಕರ್ಮದ ಹೋರೆಯನ್ನು ಮಾಡುತ್ತಾರೆ. ಆದುದರಿಂದ ಇಲ್ಲಿ ದನಗಳೂ ಹಂದಿಗಳೂ ಬಹಳ. ಅಲ್ಸ್ಟರ ಭಾಗದಲ್ಲಿ ಉಣ್ಣೆಯರಳೆಯ ಬಟ್ಟೆಗಳೂ ವಿಶೇಷವಾಗಿ ನಾರುಬಟ್ಟೆಗಳೂ ಹುಟ್ಟುತ್ತವೆ. ಇಲ್ಲಿಂದ ಧಾನ್ಯಫಲಮೂಲಾದಿಗಳು ಇಂಗ್ಲಂಡಕ್ಕೆ ಹೋಗುತ್ತವೆ; ಮತ್ತು ಕಲ್ಲಿದ್ದಲಿಯು ಇಂಗ್ಲಂಡದಿಂದ ಈದೇಶಕ್ಕೆ ಬರುತ್ತದೆ. ಡಬ್ಲಿನ್, ಬೆಲ್ಫಾಸ್ಟ, ಕಾರ್ಕ, ವಾಟರ್ಫರ್ಡ, ಲಿಮರಿಕ್, ಗಾಲ್ವೆ, ಲಂಡನ್‌ಡೆರಿ ಇವು ಅಯರ್ಲಂಡ ದೇಶದ ಮುಖ್ಯ ಬಂದರಗಳು.

## ಉಗಿಬಂಡಿಯ ಮಾರ್ಗಗಳು.

೧ನೆಯದು—ಡಬ್ಲಿನ್ನದಿಂದ ಹೊರಟು ವಿಕ್ಲೋ ಎನಿ

ಸ್ಕ್ಯಾರ್ಥಿ ಇವುಗಳ ಮೇಲೆ ಹಾಯ್ದು ವೆಕ್ಸಫರ್ಡಕ್ಕೆ ಹೋಗಿರುತ್ತದೆ.

೨ನೆಯದು—ಡಬ್ಲಿನ್ನದಿಂದ ಹೊರಟು ನ್ಯಾಸ ಕಿಲ್ಡೆಯರ ಇವುಗಳ ಮೇಲಿಂದ ಹಾಯ್ದು ಕಾರ್ಕ ಪಟ್ಟಣಕ್ಕೆ ಹೋಗಿರುತ್ತದೆ.

೩ನೆಯದು—ಡಬ್ಲಿನ್ನದಿಂದ ಹೊರಟು ಮೇನೂಥ, ಮುಲಿಂಗರ, ಅಥಲೋನ ಇವುಗಳ ಮೇಲಿಂದ ಗಾಲ್ವೆಗೆ ಹೋಗಿರುತ್ತದೆ.

೪ನೆಯದು—ಡಂಡಾಕದಿಂದ ಹೊರಟು ಕ್ಲೋನ್ಸ, ಎನಿಸ್‌ಕಿಲನ್ನ ಇವುಗಳ ಮೇಲಿಂದ ಲಂಡನ್‌ಡೆರಿಗೆ ಹೋಗಿರುತ್ತದೆ.

೫ನೆಯದು—ಡಬ್ಲಿನ್ನದಿಂದ ಡಂಡಾಕ, ಡ್ರಾಫೀಡಾ, ಲರ್ಗನ್ನ, ಫೋರ್ಟಡವುನ ಇವುಗಳ ಮೇಲಿಂದ ಬೆಲ್‌ಫಾಸ್ಟಕ್ಕೆ ಹೋಗಿರುತ್ತದೆ.

೬ನೆಯದು—ಬೆಲ್‌ಫಾಸ್ಟದಿಂದ ಎಂಟ್ರಿಮ್, ಕೊಲೆರನ್ ಇವುಗಳ ಮೇಲಿಂದ ಲಂಡನ್‌ಡೆರಿಗೆ ಹೋಗಿರುತ್ತದೆ.

### ಅಲ್ಸ್ಟರದ ೯ ಪರಗಣೆಗಳು.

೧. ಡೊನೆಗಾಲ—ಲಿಫರ್ಡ (ಫಾಯಿಲ ಹೊಳೆಯ ದಂಡೆಯ ಮೇಲೆ), ಇದು ದೊಡ್ಡ ಪಟ್ಟಣವದೆ. ಬೆಲಿಶಾನನ್, ಇದು ಸಮುದ್ರದ ದಂಡೆಗೆ ವ್ಯಾಪಾರಕ್ಕಾಗಿ ಹೆಸರಾದ ಪಟ್ಟಣವದೆ; ಇಲ್ಲಿ ಮೀನುಹಿಡಿಯುತ್ತಾರೆ.

೨. ಲಂಡನ್‌ಡೆರಿ—ಲಂಡನ್‌ಡೆರಿ (ಫಾಯಿಲ ಹೊಳೆಯ ದಂಡೆಯ ಮೇಲೆ), ಇದನ್ನು ೨ನೆಯ ಜೇಮ್ಸನು ಫ್ರೆಂಚರ ದಂಡಿನೊಡನೆ ೧೬೮೯ರಲ್ಲಿ ಮುತ್ತಿದನು;

ಆದರೆ ಅದು ಕಯ್ಸೇರಲಿಲ್ಲ. ಕೊಲೆರೇನ (ಕೆಳ
ಗಿನ ಬಾನ್ ಹೊಳೆಯ ಮೇಲೆ), ಇಲ್ಲಿ ನಾರುಬಟ್ಟೆ
ಗಳ ವ್ಯಾಪಾರವು ಬಹಳವಾಗಿ ಆಗುತ್ತದೆ.

೩. ಎಂಟ್ರಿಮ್-ಬೆಲ್‌ಫಾಸ್ಟ, ಇಲ್ಲಿ ಎರಡು ಹೆಸರಾದ
ವಿದ್ಯಾಲಯಗಳಿವೆ; ಇದು ಅಲ್ಸ್ಟರ ಭಾಗದ ಮು
ಖ್ಯಪಟ್ಟಣವೂ ಅಯರ್ಲಂಡದಲ್ಲಿ ೨ನೆಯ ಪಟ್ಟಣ
ವೂ ಆಗಿರುತ್ತದೆ; ಇಲ್ಲಿ ನಾರಿನಬಟ್ಟೆ, ನೂಲಿನರಿವೆ,
ಸರಾಯಿ, ಕನ್ನಡಿ, ಸಕ್ಕರೆ ಮುಂತಾದವುಗಳು ಹು
ಟ್ಟುತ್ತವೆ; ಇಲ್ಲಿಂದ ಲಿವ್ಹರಪೂಲಿಗೆ ದನಗಳೂ ಕಾ
ಳುಕಡಿಗಳೂ ಹೋಗುತ್ತವೆ. ಕ್ಯಾರಿಕ್‌ಫರ್ಗಸ್,
ಇದು ಬಂದರವಿರುತ್ತದೆ; ಇಲ್ಲಿ ಸೋಂಬರ್ಗನೆಂಬ
ಡಚ್ಚ ದಳವಾಯಿಯು ೧,೬೦೦ ಜನರೊಡನೆ ಬಂದಿಳಿ
ದನು (೧೬೯೦). ಲಿಸ್ಬರ್ನ (ಲಾಗನ್ ಹೊಳೆಯ
ಮೇಲೆ), ಇಲ್ಲಿ ಬುಟ್ಟೆದಾರ ವಸ್ತ್ರಗಳೂ ಜೀನುಗು
ನಾರುಬಟ್ಟೆಗಳೂ ಆಗುತ್ತವೆ; ಈಪರಗಣೆಯುತ್ತ
ರಕ್ಕೆ, ದಂಡೆಯಿಂದ ೨೦೦ ಅಡಿಗಳ ವರೆಗೆ ಹಲಿಗೆಗ
ಳನ್ನು ಜೋಡಿಸಿರುತ್ತಾರೆ; ಈಹಲಿಗೆಗಳಿಗೆ ೪೦,೦೦೦
ಕರಿಗಲ್ಲಿನ ಕಂಬಗಳು ಆಧಾರವಾಗಿರುತ್ತವೆ; ಇದಕ್ಕೆ
ಗೆಂಟನ ಕಾಜವೆ (ಫಲಿಕಾಮಾರ್ಗ) ಎನ್ನುತ್ತಾರೆ.

೪. ಡವುನ್-ಡವುನ್‌ಪ್ಯಾಟ್ರಿಕ್, ಇದು ಪ್ಯಾಟ್ರಿಕ್ಕನೆಂಬ
ಸಾಧುವಿನ ಜನ್ಮಭೂಮಿಯು; ಜರೇಮಿಟೇಲರನೆಂ
ಬವನು ಇಲ್ಲಿಯ ಮುಖ್ಯ ಧರ್ಮಾಧಿಕಾರಿಯಾಗಿ
ದ್ದನು; ಇದು ಬಂದರವಿರುತ್ತದೆ; ಇಲ್ಲಿ ತಿನ್ನುವ
ಪದಾರ್ಥಗಳು ರಫ್ತವಾಗುತ್ತವೆ.

೫. ಆರ್ಮಾಫ಼ೌ—ಆರ್ಮಾಫ಼ೌ, ಇಲ್ಲಿ ತರತರದ ನೂಲಿನ ಬಟ್ಟೆಗಳಾಗುತ್ತವೆ; ಮೊದಲು ಇಲ್ಲಿ ಆಯರ್ಲಂಡದ ಮುಖ್ಯ ಧರ್ಮಾಧಿಕಾರಿಯಿರುತ್ತಿದ್ದನು. ಲರ್ಗನ್, ಇಲ್ಲಿ ಕರಳಿಯುರಿವೆಗಳಾಗುತ್ತವೆ.

೬. ಮೊನಾಘನ್—ಮೊನಾಘನ್, ಇಲ್ಲಿ ನಾರುಬಟ್ಟೆಗಳ ವ್ಯಾಪಾರವು ಬಹಳವಾಗಿ ಆಗುತ್ತದೆ.

೭. ಕೇವ್ಹನ್—ಕೇವ್ಹನ್, ಇಲ್ಲಿ ೨ನೆಯ ಜೇಮ್ಸನ ಪಕ್ಷದವರಾದ ಕ್ಯಾಥೊಲಿಕ್ಕರಿಗೂ ಎನಿಸ್ಕಿಲನ್ನದ ಪ್ರಾಟೆಸ್ಟಂಟರಿಗೂ ದೊಡ್ಡ ಕದನವಾಯಿತು.

೮. ಫರ್ಮನಾಘ—ಎನಿಸ್ಕಿಲನ್, ಇದು ಆಯರ್ಲಂಡ ದಲ್ಲಿ ಬಹು ರಮಣೀಯವಾದ ಊರು; ೧೬೮೮ರಲ್ಲಿ ೨ನೆಯ ಜೇಮ್ಸನು ಇದನ್ನು ಮುತ್ತಿದಾಗ ಈ ಪೂರ ಜನರು ಬಲುಗಲಿತನದಿಂದ ಕಾದಿದರು.

೯. ಟಿರೋನ—ಓಮಾಘ, ಇದನ್ನು ೨ನೆಯ ಜೇಮ್ಸನು ೧೬೮೯ರಲ್ಲಿ ಸುಟ್ಟನು. ಡಂಗಾನನ್, ಇದು ಈ ಪರಗಣೆಯ ಕಲ್ಲಿದ್ದಲಿಕಣಿಗಳ ಮಧ್ಯಬಿಂದುವಾಗಿರುತ್ತದೆ; ಮತ್ತು ಮೊದಲು ಇದು ಆಲ್ಸ್ಟರದ ಅರಸರ ರಾಜಧಾನಿಯಾಗಿತ್ತು.

ಲಿನ್ಸ್ಟರದ ೧೨ ಪರಗಣೆಗಳು.

೧೦. ಲವ್ಹ—ಡ್ರಾಘೇಡಾ (ಬಾಯನ ಹೊಳೆಯ ಮೇಲೆ), ಇಲ್ಲಿಂದ ಕಾಳು, ತೊಗಲು, ಬೆಣ್ಣೆ ಮುಂತಾದವು ಪರವೂರಿಗೆ ಹೋಗುತ್ತವೆ; ಇದು ಕಾಳಿನ ಪಡಿಮೂಲೆಯ ಸ್ಥಳವು; ಇದನ್ನು ಕ್ರಾಮವೆಲ್ಲನು ೧೬೪೯ರಲ್ಲಿ ಮುತ್ತಿ ಹಿಡಿದುಕೊಂಡನು; ಇವರ

ನೆರೆಯಲ್ಲಿಯಾದ ಬಾಯುನದ ಕಾಳಗದಲ್ಲಿ ೩ನೆಯ ಉಯಿಲ್ಯಮ್ಮನು ೨ನೆಯ ಜೇಮ್ಸನನ್ನು ಸೋಲಿಸಿದನು (೧೬೯೦).

೧೧. ಮಿಾಥ—ಟ್ರಿಮ್ಮ, ಇಲ್ಲಿ ಅಯರ್ಲಂಡದ ಪ್ರಜಾಸಭೆಯು ೧೫ನೆಯ ಶತಕದಲ್ಲಿ ಕೂಡುತ್ತಿತ್ತು; ಇದರ ನೆರೆಯಲ್ಲಿದ್ದ ಡಂಗನ್‌ಕೋಟೆಯು ವೆಲಸ್ಲೆ ಮನೆತನದ ವಾಸಸ್ಥಾನವಾಗಿತ್ತು; ಇದರ ಸಮಿಾಪದಲ್ಲಿಯೇ ಮೊದಲು ಅಯರ್ಲಂಡದ ರಾಜಧಾನಿಯಾದ ತಾರಾ ಎಂಬವೂರು ಇತ್ತು.

೧೨. ಡಬ್ಲಿನ್—ಡಬ್ಲಿನ್, ಇದು ಯುರೋಪ ಖಂಡದಲ್ಲಿರುವ ಸುಂದರವಾದ ಪಟ್ಟಣಗಳಲ್ಲಿಯೊಂದಾಗಿರುತ್ತದೆ; ಇದು ಬ್ರಿಟಿಶ್ ನಡುಗಡ್ಡೆಗಳಲ್ಲಿ ೩ನೆಯ ದೊಡ್ಡಪಟ್ಟಣವು; ಇಲ್ಲಿಯ ಕಟ್ಟಣೆಗಳು ಬಲು ಅಂದವಾಗಿರುತ್ತವೆ; ಆಯರ್ಲಂಡದ ಅಧಿಪತಿಯು ಈಪಟ್ಟಣದಲ್ಲಿರುತ್ತಾನೆ; ಇಲ್ಲಿ ಟ್ರನಿಟಿ ವಿದ್ಯಾಲಯವೂ ಕ್ಯಾಥೊಲಿಕ್ಕರ ವಿಶ್ವವಿದ್ಯಾಲಯವೂ ಇರುತ್ತವೆ; ಇಲ್ಲಿ ವೆಲಿಂಗ್ಟನ್ನದ ಡ್ಯೂಕನು ಹುಟ್ಟಿದನು (೧ನೆ ಮೇ ೧೭೬೯); ಇದು ಲಿಫಿ ಹೊಳೆಯ ಎರಡುಬದಿಗೂ ಇರುತ್ತದೆ; ಇದರ ಜನಸಂಖ್ಯೆ ೨,೪೯,೦೦೦. ಕಿಂಗಸ್ಟೌನ, ಇದುಪ್ರಸಿದ್ಧವಾದ ಬಂದರವದೆ; ಇದರಲ್ಲಿ ಬೇಕಾದಷ್ಟು ಹಡಗುಗಳು ನಿಲ್ಲುತ್ತವೆ; ಇದು ಡಬ್ಲಿನ್ ಹೋಲಿಹೆಡ್ಡಗಳ ನಡುವೆ ಟಪಾಲಕಟ್ಟುವ ಸ್ಥಳವು. ಬಾಲಬ್ರಿಗನ್, ಇಲ್ಲಿ ಚಲ್ಲಣಕಾಲುಚೀಲಗಳಾಗುತ್ತವೆ.

೧೩. ವಿಕ್ಲೊ—ವಿಕ್ಲೊ, ಇದೊಂದು ಸಣ್ಣ ಬಂದರವಿರುತ್ತದೆ. ಆರ್ಕ್ಲೋ, ಇಲ್ಲಿಂದ ಸೀಸತಾಮ್ರಗಳು ರಫ್ತವಾಗುತ್ತವೆ.

೧೪. ವೆಕ್ಸಫರ್ಡ—ವೆಕ್ಸಫರ್ಡ (ಸ್ಲಾನಿ ಹೊಳೆಯ ಮೇಲೆ), ಇಲ್ಲಿಂದ ಮೀನುಗಳು ಬೇರೂರಿಗೆ ಹೋಗುತ್ತವೆ.

೧೫. ಕಿಲ್ಡೆಯರ—ಮೇನೂಥ, ಇಲ್ಲಿ ಕ್ಯಾಥೊಲಿಕ್ ಮತದ ವರದೊಂದು ವಿದ್ಯಾಲಯವದೆ. ನಾಸ, ಇದು ಬಹಳ ಪುರಾತನದೂರು; ಇಲ್ಲಿ ಲಿನ್ಸ್ಟರದ ಅರಸರು ಮೊದಲು ವಾಸಮಾಡುತ್ತಿದ್ದರು.

೧೬. ಕಾರ್ಲೊ—ಕಾರ್ಲೊ, ಇಲ್ಲಿಯೊಂದು ದೊಡ್ಡಗುಡಿಯದೆ.

೧೭. ಕಿಲ್ಕೆನಿ—ಕಿಲ್ಕೆನಿ (ನೋರ ಹೊಳೆಯ ಮೇಲೆ), ಇಲ್ಲಿ ಕರಿಸಂಗಮುರವರಿಕಲ್ಲುಗಳು ವಿಪುಲವಾಗಿ ದೊರೆಯುತ್ತವೆ; ಇದನ್ನು ಕ್ರಾಮವೆಲ್ಲನು ೧೬೫೦ರಲ್ಲಿ ಹಿಡಿದುಕೊಂಡನು.

೧೮. ಕ್ವೀನ್ಸ—ಮೇರಿಬರ್ಗ (ಬಾರೊ ಹೊಳೆಯ ಮೇಲೆ), ಇದಕ್ಕೆ ಇಂಗ್ಲಂಡದ ರಾಣಿಯಾಗಿದ್ದ (೧೫೫೩—೫೮) ಮೇರಿಯಿಂದ ಈಹೆಸರು ಬಂದಿರುತ್ತದೆ.

೧೯. ಕಿಂಗ್ಸ—ಟುಲಾಮೋರ, ಇಲ್ಲಿ ನಾರುಬಟ್ಟೆಗಳ ಕಾರಖಾನೆಗಳಿರುತ್ತವೆ. ಫಿಲಿಪ್ಸಟೌನ, ಇದಕ್ಕೆ ಇಂಗ್ಲಂಡದ ರಾಣಿಯಾಗಿದ್ದ ಮೇರಿಯ ಗಂಡನ ಸನ್ಮಾನಾರ್ಥವಾಗಿ ಈಹೆಸರು ಬಂದಿರುತ್ತದೆ.

೨೦. ವೆಸ್ಟಮೀಥ—ಮುಲಿಂಗರ, ಇಲ್ಲಿ ದಂಡಿನ ಪಾಳ್ಯವಿರುತ್ತದೆ.

೨೧. ಲಾಂಗ್ಫರ್ಡ—ಲಾಂಗ್ಫರ್ಡ, ಇಲ್ಲಿ ಕ್ಯಾಥೋಲಿಕ್ ಮತದವರ ಗುಡಿಯಿರುತ್ತದೆ. ಎಜ್ಜವರ್ಥ್ಸ್‌ಟೌನ, ಇಲ್ಲಿ ಹೆಸರಾದ ಗ್ರಂಥಕರ್ತ್ರಿಯಾದ ಮೇರಿಯಾ ಎಜ್ಜವರ್ಥಳು ಹುಟ್ಟಿದಳು.

ಮನ್‌ಸ್ಟರದ ೬ ಪರಗಣೆಗಳು.

೨೨. ವಾಟರಫೋರ್ಡ—ವಾಟರಫೋರ್ಡ (ಸೂರ ಹೊಳೆಯ ಮೇಲೆ), ಇದು ಬಂದರದ ಸ್ಥಳವಿರುತ್ತದೆ. ಲಿಸ್ಮೋರ, ಇಲ್ಲಿ ಪಾಟಿಯ ಕಲ್ಲುಗಳು ದೊರೆಯುತ್ತವೆ.

೨೩. ಕಾರ್ಕ—ಕಾರ್ಕ (ಲೀ ಹೊಳೆಯ ಮೇಲೆ), ಇದು ಅಯರ್ಲಂಡದ ೩ನೆಯ ಪಟ್ಟಣವೂ ಉತ್ತಮ ಬಂದರವೂ ವ್ಯಾಪಾರದ ಮುಖ್ಯಸ್ಥಾನವೂ ಆಗಿರುತ್ತದೆ; ಇದು ಹಡಗುನಿಲ್ಲಲಿಕ್ಕೆ ಯೋಗ್ಯವಾದ ಸ್ಥಳವು; ಇಲ್ಲಿ ನಾರುಣ್ಣೆಯುವಸ್ತ್ರ, ಕಾಗದ, ತೊಗಲು, ಕಾಜಿನಪಾತ್ರೆ ಮುಂತಾದವುಗಳು ಆಗುತ್ತವೆ; ಇಲ್ಲಿಯೊಂದು ಹೆಸರಾದ ವಿದ್ಯಾಲಯುವಿರುತ್ತದೆ; ಇಲ್ಲಿ ಸೀಸತಾಮ್ರಗಳ ಆದರುಗಳೂ ಕಲ್ಲಿದ್ದಲಿಯೂ ಸಿಗುತ್ತವೆ; ಇದರ ಸೆರೆಯಲ್ಲಿದ್ದ ಬ್ಲಾರ್ನಿಕೋಟೆಯಲ್ಲಿಯೊಂದು ಕಲ್ಲು ಇರುತ್ತದೆ; ಅದಕ್ಕೆ ಮುದ್ದು ಕೊಟ್ಟವರು ಮಾತುಗಾರರಾಗುತ್ತಾರೆಂದು ಜನರ ನಂಬಿಗೆಯುಂಟು. ಯೂಗಲ್, ಇಲ್ಲಿ ವಾಲ್ಟರ ರಾಲೆ ದೊರೆಯು ಇರುತ್ತಿದ್ದನು. ಕಿನ್ಸೇಲ, ಇದು ವ್ಯಾಪಾರಕ್ಕೆ ಹೆಸರಾದ ಬಂದರವು;

ಇಲ್ಲಿ ಜೇಮ್ಸನು ಫ್ರೆಂಚರ ದಂಡಿನೊಡನೆ ಬಂದಿಳಿದನು (೧೨ ಮಾರ್ಚಿ ೧೬೮೯).

೨೪. ಕೆರಿ—ಟ್ರಾಲಿ, ಇಲ್ಲಿಂದ ಬೆಣ್ಣೆಯೂ ಕಾಳೂ ರಫ್ತಾಗುತ್ತವೆ. ಕಿಲರ್ನಿ, ಇಲ್ಲಿದ್ದ ಗುಡ್ಡಗಳೂ ಸರೋವರಗಳೂ ಬಹಳ ರಮಣೀಯವಾಗಿರುತ್ತವೆ.

೨೫. ಕ್ಲೈಯರ—ಎನಿಸ್, ಇಲ್ಲಿಯೊಂದು ಹಳದಾದರಮನೆಯಿರುತ್ತದೆ.

೨೬. ಲಿಮರಿಕ್—ಲಿಮರಿಕ್ (ಶಾನನ್ ಹೊಳೆಯ ಮೇಲೆ), ಇದು ಅಯರ್ಲಂಡದಲ್ಲಿ ೪ನೆಯ ದೊಡ್ಡ ಪಟ್ಟಣವು; ಇದು ಮನ್ಸ್ಟರದ ರಾಜಧಾನಿಯಾಗಿತ್ತು; ಇಲ್ಲಿ ಕಲ್ಲಿದ್ದಲಿಯು ದೊರೆಯುತ್ತದೆ; ಇಲ್ಲಿಯ ಜನರು ದನಗಳನ್ನು ಸಾಕಿ ಪರವೂರಿಗೆ ಮಾರಾಟಕ್ಕೆ ಕಳುಹುತ್ತಾರೆ; ಇಲ್ಲಿ ಜರ, ಸಣಬು, ಮೀನುಗಾಣ ಮುಂತಾದವುಗಳು ಹುಟ್ಟುತ್ತವೆ; ಇದನ್ನು ೩ನೆಯ ಉಯಿಲ್ಯಮ್ಮನು ೧೬೯೧ರಲ್ಲಿ ಹಿಡಿದುಕೊಂಡನು.

೨೭. ಟಿಪ್ಪರರಿ—ಕ್ಲಾನ್ಮೆಲ್, ಇಲ್ಲಿಂದ ಕಾಳುಕಡಿಗಳು ಪರವೂರಿಗೆ ಹೋಗುತ್ತವೆ.

ಕನ್ನಾಟದ ೫ ಪರಗಣೆಗಳು.

೨೮. ಗಾಲ್ವೆ—ಗಾಲ್ವೆ, ಇಲ್ಲಿಯೊಂದು ಹೆಸರಾದ ವಿದ್ಯಾಲಯವದೆ; ಇಲ್ಲಿಂದ ಅಮೇರಿಕಕ್ಕೆ ಟಪಾಲು ಹೋಗುತ್ತದೆ; ಇದರ ಸೆರೆಯಲ್ಲಿಯೇ ಕಾನೆಮಿರಾ ಎಂಬ ತೆಗ್ಗು ದಿನ್ನೆಗಳುಳ್ಳ ರಮಣೀಯವಾದ ಪ್ರದೇಶವಿರುತ್ತದೆ. ಬಾಲಿನ್ನಸ್ಲೊ, ಇಲ್ಲಿ ಪ್ರತಿವರ್ಷ

ದನಗಳ ಪ್ರದರ್ಶನವಾಗುತ್ತದೆ. ಅಘ್ರಿಮ್ ಇಲ್ಲಿ ಶಿನೆಯ ಉಯಿಲ್ಯಮ್ಮನು ೨ನೆಯ ಜೇಮ್ಸನನ್ನು ಪೂರ್ಣವಾಗಿ ಸೋಲಿಸಿದನು (೧೬೯೧).

೨೯. ವೇಯೊ—ವೆಸ್ಟಪೋರ್ಟ್, ಇದೊಂದು ಬಂದರವಿರುತ್ತದೆ. ಕ್ಯಾಸಲ್ಬಾರ, ಇಲ್ಲಿ ನಾರುಬಟ್ಟೆಗಳ ವ್ಯಾಪಾರವು ಬಹಳವಾಗುತ್ತದೆ; ಇದನ್ನು ಫ್ರೆಂಚರು ೧೭೯೮ರಲ್ಲಿ ಹಿಡಿದುಕೊಂಡಿದ್ದರು.

೩೦. ಸ್ಲಾಯಗೊ—ಸ್ಲಾಯಗೊ, ಈಬಂದರದಿಂದ ಕಾಳುಕಡಿಗಳು ಬೇರೂರಿಗೆ ಹೋಗುತ್ತವೆ.

೩೧. ಲಿಟ್ರಿಮ್—(ಈ ಪರಗಣೆಯಲ್ಲಿ ಕಬ್ಬಿಣದ ಕಲ್ಲುಗಳು ದೊರೆಯುತ್ತವೆ; ಅಯರ್ಲಂಡದಲ್ಲಿ ಕಲ್ಲಿದ್ದಲಿಯು ಬಹಳ ದೊರೆಯುದ್ದರಿಂದ ಕಣಿಗಳಿಂದ ಕಬ್ಬಿಣ ತೆಗೆಯುವ ಕೆಲಸವು ಹೆಚ್ಚಾಗಿ ನಡೆಯುವದಿಲ್ಲ). ಕ್ಯಾರಿಕ್ (ಶಾನನ್ ಹೊಳೆಯ ಮೇಲೆ), ಇಲ್ಲಿಂದ ಕಾಳು, ಬೆಣ್ಣೆ, ನೂಲು ಮುಂತಾದ ಪದಾರ್ಥಗಳು ಬೇರೂರಿಗೆ ಹೋಗುತ್ತವೆ.

೩೨. ರಾಸಕಾಮನ್ನ—ರಾಸಕಾಮನ್ನ, ಇಲ್ಲಿ ನಾರುಬಟ್ಟೆಗಳೂ ಉಣ್ಣೆಯವಸ್ತ್ರಗಳೂ ಮಣ್ಣಿನಪಾತ್ರಗಳೂ ಹುಟ್ಟುತ್ತವೆ; ಕನ್ನಾಟದ ಮೊದಲಿನ ಅರಸನಾದ ಓಕನ್ನಾರನ ಗೋರಿಯು ಇಲ್ಲಿಯೇ ಇರುತ್ತದೆ.

## ನಡುಗಡ್ಡೆಗಳು.

೧ ರಾಘಲಿನ್—ಎಂಟ್ರಿಮ್ಮದ ಉತ್ತರಕ್ಕೆ.

೨ ಟೋರಿ—ಡೊನೆಗಾಲದ ವಾಯುವ್ಯಕ್ಕೆ.

೩ ಏರನ್—ಡೊನೆಗಾಲದ ಪಶ್ಚಿಮಕ್ಕೆ.

೪ ಕ್ಲೆಯರ—ಗಾಲ್ವೆಯ ದಂಡೆಯ ಮೇಲೆ.
೫ ಎಕಿಲ್—ಮೇಯೊದ ಪಶ್ಚಿಮಕ್ಕೆ.
೬ ಆರನ್ನ ನಡುಗಡ್ಡೆಗಳು-ಗಾಲ್ವೆಯುಪಸಾಗರದಲ್ಲಿ.

## ಭೂಶಿರಗಳು.

೧ ಮಾಲಿನ್‌ಹೆಡ್ಡ—ಡೊನೆಗಾಲದ ಉತ್ತರಕ್ಕೆ.
೨ ಫೇರಹೆಡ್ಡ—ಎಂಟ್ರಿಮ್ಮದ ಉತ್ತರಕ್ಕೆ.
೩ ಹವ್ರುಥಹೆಡ್ಡ—ಡಬ್ಲಿನ್ನದ ಪೂರ್ವಕ್ಕೆ.
೪ ವಿಕ್ಲೊಹೆಡ್ಡ—ವಿಕ್ಲೊದ ಪೂರ್ವಕ್ಕೆ.
೫ ಕ್ಲೆಯರ—ಕ್ಲೆಯರದಲ್ಲಿ.
೬ ಎರಿಸ್‌ಹೆಡ್ಡ } ಮೇಯೊದ ಪಶ್ಚಿಮಕ್ಕೆ.
೭ ಎಕಿಲ್‌ಹೆಡ್ಡ }
೮ ಡನ್ಮೋರಹೆಡ್ಡ—ಕೆರಿಯ ಪಶ್ಚಿಮಕ್ಕೆ.
೯ ಮಿಝೆನ್ನಹೆಡ್ಡ—ದಕ್ಷಿಣದಲ್ಲಿ.

## ಅಖಾತಗಳು.

೧ ಬೆಲ್‌ಫಾಸ್ಟಬೇ—ಎಂಟ್ರಿಮ್ಮ ಡವುನ್ನಗಳ ನಡುವೆ.
೨ ಡಂಡಾಕಬೇ—ಲವುಥದ ಮೂಡಣಿಗೆ.
೩ ಡಬ್ಲಿನ್ನಬೇ—ಡಬ್ಲಿನ್ನದ ಮೂಡಣಿಗೆ.
೪ ಡಿಂಗಲ್‌ಬೇ— } ಕೆರಿಯ ಪಡುವಣಿಗೆ.
೫ ಟ್ರಾಲಿಬೇ— }
೬ ಗಾಲ್ವೆಬೇ—ಗಾಲ್ವೆಕ್ಲೆಯರಗಳ ನಡುವೆ.
೭ ಡೊನೆಗಾಲಬೇ—ಡೋನೆಗಾಲದ ತೆಂಕಣಿಗೆ.
೮ ಸ್ಲಾಯಗೊಬೇ—ಸ್ಲಾಯುಗೊದ ಬಡಗಣಿಗೆ.

## ಸರೋವರಗಳು.

೧ ನೆಯಾಘ—ಎಂಟ್ರಿಮ್ಮ ಟಿರೋನಗಳ ನಡುವೆ.
೨ ಅರ್ನ
೩ ಡೆರ್ಗ್ } ಶಾನನ್ನ ಹೊಳೆಯು ಮುಖದ ಹತ್ತರ.
೪ ರೀ
೫ ಮಾಸ್ಕ—ಮೇಯೊಗಾಲ್ವೆಗಳ ನಡುವೆ.
೬ ಕಾರಿ—ಗಾಲ್ವೆಯಲ್ಲಿ.
೭ ಕಿಲರ್ನಿ—ಕೆರಿಯಲ್ಲಿ.

## ಪರ್ವತಗಳು.

೧ ಮೋರ್ನ—ಡವುನ್ನದ ತೆಂಕಣಿಗೆ.
೨ ವಿಕ್ಲೊ—ವಿಕ್ಲೊದಲ್ಲಿ.
೩ ಕರಾಂಟೋ—ಕೆರಿಯಲ್ಲಿ.

## ಹೊಳೆಗಳು.

೧. ಫಾಯಿಲ—ಡೊನೆಗಾಲ, ಲಂಡನ್‌ಡೆರಿಗಳಲ್ಲಿ ಹರಿದು ಫಾಯಿಲ್ ಉಪಸಾಗರಕ್ಕೆ ಕೂಡುತ್ತದೆ. ಇದರ ಥಡದಲ್ಲಿ ಲಂಡನ್‌ಡೆರಿ, ಲಿಫರ್ಡ.

೨. ಬಾನ್ನ—ನೆಯಾಘ ಸರೋವರದಲ್ಲಿ ಹುಟ್ಟಿ ಎಂಟ್ರಿಮ್ಮ ಲಂಡನ್‌ಡೆರಿಗಳಲ್ಲಿ ಹರಿದು ಅಟ್ಲಾಂಟಿಕ ಮಹಾಸಾಗರಕ್ಕೆ ಕೂಡುತ್ತದೆ. ಇದರ ಥಡದಲ್ಲಿ ಕೊಲೆರನ್.

೩. ಲಿಫಿ—ವಿಕ್ಲೊ, ಕಿಲ್ಡೆಯರ, ಡಬ್ಲಿನ್ನಗಳಲ್ಲಿ ಹರಿದು ಅಯರಿಶ್ ಸಮುದ್ರಕ್ಕೆ ಕೂಡುತ್ತದೆ. ಇದರ ಥಡದಲ್ಲಿ ನ್ಯಾಸ, ಡಬ್ಲಿನ್.

೪. ಸ್ಲಾನಿ—ಕಾರ್ಲೊ, ವೆಕ್ಸ್ಫರ್ಡಗಳಲ್ಲಿ ಹರಿದು, ಸೆಂಟ ಜಾರ್ಜ ಅಖಾತಕ್ಕೆ ಕೂಡುತ್ತದೆ.

೫. ಬ್ಲ್ಯಾಕ್ಕವಾಟರ—ಕಾರ್ಕ, ವಾಟರಫ್ರೋರ್ಡಗಳಲ್ಲಿ ಹರಿದು ಅಟ್ಲಾಂಟಿಕ್ ಮಹಾಸಾಗರಕ್ಕೆ ಕೂಡುತ್ತದೆ. ಇದರ ಧಡದಲ್ಲಿ ಲಿಸ್ಮೋರ.

೬. ಶಾನನ್ನ—ಲಿಟ್ರಿಮ್ ಪರಗಣೆಯಲ್ಲಿದ್ದ ಕಿಲ್ಕೆನಿ ಪರ್ವತದಲ್ಲಿ ಹುಟ್ಟಿ, ರೀ, ಡೆರ್ಗ, ಅರ್ನ ಸರೋವರಗಳೊಳಗಿಂದ ೨೨೪ ಮೈಲು ಹರಿದು, ಕ್ಲೆಯರ, ಲಿಮರಿಕ್ ಪರಗಣೆಗಳ ನಡುವೆ ಹಾಯ್ದು ಅಟ್ಲಾಂಟಿಕ್ ಮಹಾಸಾಗರಕ್ಕೆ ಕೂಡುತ್ತದೆ. ಇದರಲ್ಲಿ ೨೧೩ ಮೈಲುಗಳ ವರೆಗೆ ಹಡಗುಗಳು ನಡೆಯುತ್ತವೆ. ಈನದಿಯಿಂದ ೭೦,೦೦೦ ಚಚ್ಚೌಕು ಮೈಲು ಭೂಮಿಗೆ ನೀರು ದೊರೆಯುತ್ತದೆ. ಇದಕ್ಕೆ ಕೂಡುವ ಹೊಳೆಗಳಲ್ಲಿ ಸಕ್ಕ ಹೊಳೆಯು ದೊಡ್ಡದು. ಇದರ ಧಡದಲ್ಲಿ ಲಿಮರಿಕ್.



# ಪರಿಶಿಷ್ಟ (ಅ).

ಇಂಗ್ಲಂಡದ ಇತಿಹಾಸಕ್ಕೆ ಸಂಬಂಧಿಸಿದ ಬೇರೆ ದೇಶಗಳಲ್ಲಿದ್ದ ಸ್ಥಳಗಳಾವವೆಂದರೆ:—

೧. ಬ್ಲಾಯಿ—ಇದು ಪ್ರಾನ್ಸ ದೇಶದಲ್ಲಿ ಅರ್ಲಿನ್ಸದ ನೈರುತ್ಯಕ್ಕೆ ೩೫ ಮೈಲಿನ ಮೇಲಿರುತ್ತದೆ.

೨. ಏಕರ—ಇದು ಪಾಲೆಸ್ಟೈನದೊಳಗೆ ಕಾರ್ಮೆಲ್ ಗುಡ್ಡದಡಿಯಲ್ಲಿ ಸೀರಿಯಾದ ದಂಡೆಯ ಮೇಲಿರುತ್ತದೆ; ಇಲ್ಲಿಯಾದ ಕಾಳಗದಲ್ಲಿ ಇಂಗ್ಲಂಡದ ಮೊದಲನೆಯ ರಿಚರ್ಡನು ಸಾರಾಸೆನ್ನರನ್ನು ಸೋಲಿಸಿದನು (೧೧೯೧).

೩. ರುವಾಂಗ—ಇದು ಪ್ರಾನ್ಸ ದೇಶದಲ್ಲಿ ಪಾರೀಸದ ವಾಯುವ್ಯಕ್ಕೆ ೬೪ ಮೈಲಿನ ಮೇಲೆ ಸೀನ ಹೊಳೆಯ ದಂಡೆಯಲ್ಲಿರುತ್ತದೆ; ಇಲ್ಲಿ ಇಂಗ್ಲಂಡದ ಜಾನನು ತನ್ನ ಅಣ್ಣನ ಮಗನಾದ ಆರ್ಥರನನ್ನು ಸೆರೆಯಲ್ಲಿಟ್ಟು ತಾನೇ ಇಂಗ್ಲಂಡದ ಪಟ್ಟವೇರಿದನು (೧೧೯೯).

೪. ಕೇಲೆ—ಇದು ಫ್ರಾನ್ಸ ದೇಶದಲ್ಲಿಯೊಂದು ಬಂದರವಿರುತ್ತದೆ; ಇದು ಡೋವ್ಹರದ ಆಗ್ನೇಯಕ್ಕೆ ೨೬ತ್ತಿ ಮೈಲಿನ ಮೇಲಿದೆ; ಇದನ್ನು ಇಂಗ್ಲಂಡದ ೩ನೆಯ ಎಡ್ವರ್ಡನು ೧೩೪೬ರಲ್ಲಿ ಹಿಡಿದುಕೊಂಡನು; ಮುಂದೆ ಫ್ರೆಂಚರು ಇದನ್ನು ತಿರುಗಿ ತೆಗೆದುಕೊಂಡರು (೧೫೫೮).

೫. ಕ್ರೆಸ್ಸಿ—ಇದು ಫ್ರಾನ್ಸ ದೇಶದಲ್ಲಿ ಕೇಲೆಯ ತೆಂಕಣಿಗೆ ೪೮ ಮೈಲಿನ ಮೇಲಿದೆ; ಇಲ್ಲಿಯಾದ ಕಾಳಗದಲ್ಲಿ ಇಂಗ್ಲಂಡದ ೩ನೆಯ ಎಡ್ವರ್ಡನೂ ಅವನ ಮಗನೂ ಕೂಡಿ ಫ್ರೆಂಚರನ್ನು ಮುರಿಬಡಿದರು (೧೩೪೬).

೬. ಪಾಯಿಕ್ಟಿಯರ್ಸ—ಇದು ಫ್ರಾನ್ಸದ ಪಶ್ಚಿಮದಲ್ಲಿ ಟೂರ್ಸದ ನೈರುತ್ಯಕ್ಕೆ ೫೮ ಮೈಲಿನ ಮೇಲಿದೆ; ಇಲ್ಲಿಯಾದ ಕಾಳಗದಲ್ಲಿ ಕಪ್ಪರಸುಮಗನು ಫ್ರೆಂಚರನ್ನು ಸೋಲಿಸಿದನು (೧೩೫೬).

೭. ಹಾರ್ಫ್ಲೂರ—ಇದು ಫ್ರಾನ್ಸ ದೇಶದಲ್ಲಿ ಸೀನ ಹೊಳೆಯು ಮುಖದ ಹತ್ತರವದೆ; ಇದನ್ನು ೫ನೆಯ ಹೇನ್ರಿಯು ಹಿಡಿದುಕೊಂಡನು (೧೪೧೫).

೮. ಅಜಿಂಕೋರ್ಟ—ಇದು ಫ್ರಾನ್ಸ ದೇಶದ ಉತ್ತರದಲ್ಲಿ ಕೇಲೆಯ ಆಗ್ನೇಯಕ್ಕೆ ೩೬ ಮೈಲಿನ ಮೇಲಿದೆ; ಇಲ್ಲಿ ಇಂಗ್ಲಂಡದ ೫ನೆಯ ಹೇನ್ರಿಯು ಫ್ರಾನ್ಸದ ದಳವಾಯಿಯಾದ ಅರ್ಲಿನ್ಸದ ಡ್ಯೂಕನನ್ನು ಸೆರೆಸೋಲಿಸಿದನು (೧೪೧೫).

೯. ಆರ್ಲೀನ್ಸ—ಇದು ಫ್ರಾನ್ಸ ದೇಶದಲ್ಲಿ ಲೊಯರ ಹೊಳೆಯಲ್ಲಿ ಪಾರೀಸದ ನೈರುತ್ಯಕ್ಕೆ ೬೦ ಮೈಲಿನ ಮೇಲಿದೆ; ಇದಕ್ಕೆ ಇಂಗ್ಲಂಡದ ದಳವಾಯಿಯಾದ ಬೆಡ್ಫರ್ಡದ ಡ್ಯೂಕನು ಮುತ್ತಿದ ಬಳಿಕ ಆರ್ಕದ ಜೋನಳು ಆಮುತ್ತಿಗೆಯನ್ನೆಬ್ಬಿಸಿದಳು (೧೪೨೯).

೧೦. ಗಾಯಿನಿಗೇಟ—ಇದು ಫ್ರಾನ್ಸ ದೇಶದ ಉತ್ತರದಲ್ಲಿ ಬಲೂನದ ಮೂಡಣಿಗೆ ೧೨ ಮೈಲಿನ ಮೇಲಿದೆ. ಇಲ್ಲಿ ಇಂಗ್ಲಂಡದ ೮ನೆಯ ಹೇನ್ರಿಯು ಫ್ರೆಂಚರನ್ನು ಸೋಲಿಸಿದನು (೧೫೧೩). ಈ ಕಾಳಗದಲ್ಲಿ ಫ್ರೆಂಚ ಪಡೆಗಾರರು ರಿಕೇಬುಗಳನ್ನು ಪಯೋಗಿಸಿ ಕುದುರೆಗಳನ್ನೋಡಿಸಿಕೊಂಡು ಹೋದುದರಿಂದ ಇದಕ್ಕೆ ರಿಕೇಬಿನ ಕಾಳಗವೆನ್ನುತ್ತಾರೆ.

೧೧. ರೋಚೆಲಿ—ಇದು ಫ್ರಾನ್ಸ ದೇಶದ ಪಶ್ಚಿಮದಲ್ಲಿ ಪಾಯಿಟ್ಟಿಯರ್ಸದಿಂದ ೮೦ ಮೈಲಿನ ಮೇಲೊಂದು ಬಂದರವದ. ಇಲ್ಲಿದ್ದ ಹ್ಯೂಜೆನಾಟ್ಸರನ್ನು (ವಿರುದ್ಧಮತದವರನ್ನು) ಫ್ರಾನ್ಸದ ದಳವಾಯಿಯಾದ ರಿಚಲುವೆಂಬವನು ಮುತ್ತಿದಾಗ, ಇಂಗ್ಲಂಡದ ೧ನೆಯ ಚಾರ್ಲಸನು ಆಮುತ್ತಿಗೆಯನ್ನೆಬ್ಬಿಸಲಿಕ್ಕೆ ಬಕಿಂಗ್ಹ್ಯಾಮದ ಡ್ಯೂಕನನ್ನು ಕಳುಹಿದನು (೧೬೨೮).

೧೨. ಸೆಂಟಜರ್ಮೇನ್ಸ—ಇದು ಪಾರೀಸದ ಪಡುವಣಿಗೆ ೧೦ ಮೈಲಿನ ಮೇಲೆ ಸೀನ ಹೊಳೆಯ ದಂಡೆಯಲ್ಲಿದೆ; ಇಲ್ಲಿ

ದ್ದರಮನೆಯಲ್ಲಿ ಇಂಗ್ಲಂಡದಿಂದೋಡಿಬಂದ ೨ನೆಯ ಜೇಮ್ಸನು ಸಾಯುವವರೆಗುಳಿದನು (೧೬೮೮–೧೭೦೧).

೧೩. ಲಾಹೋಗ—ಇದು ಫ್ರಾನ್ಸದ ವಾಯುವ್ಯಕ್ಕೊಂದು ಭೂಶಿರವಿರುತ್ತದೆ; ಇಲ್ಲಿಯಾದ ಹಡಗುಗಾಳಗದಲ್ಲಿ ಇಂಗ್ಲಿಷರು ಫ್ರೆಂಚರನ್ನು ಸೋಲಿಸಿದರು (೧೬೯೨).

೧೪. ರಿಸ್ವಿಕ್ಕ—ಇದು ಹಾಲಂಡ ದೇಶದಲ್ಲಿ ಹೇಗದ ವಾಯುವ್ಯಕ್ಕೆ ೨ ಮೈಲಿನ ಮೇಲೊಂದು ಹಳ್ಳಿಯದೆ; ಇಲ್ಲಿ ೧೬೯೭ ರಲ್ಲೊಂದೊಪ್ಪಂದವಾಯಿತು. (ಚ. ಸ. ೨ನೆಯ ಭಾಗ ಪುಟ ೭೦–೭೧ ನೋಡಿರಿ).

೧೫. ಬ್ಲೆನ್ಹೀಮ—ಇದು ಬವ್ಹೇರಿಯಾ ಪ್ರಾಂತದಲ್ಲಿ ಆಗ್ಸಬರ್ಗದ ವಾಯುವ್ಯಕ್ಕೆ ೨೩ ಮೈಲಿನ ಮೇಲೆ ಡಾನ್ಯೂಬ ಹೊಳೆಯ ದಂಡೆಯಲ್ಲೊಂದು ಹಳ್ಳಿಯದೆ; ಇಲ್ಲಿಯಾದ ಕಾಳಗದಬಗ್ಗೆ ಚ. ಸ. ೨ನೆಯ ಭಾಗ ಪುಟ ೭೯ ನೋಡಿರಿ.

೧೬. ಯೂಟ್ರೆಕ್ಟ—ಇದು ಹಾಲಂಡದಲ್ಲಿ ಅಮಸ್ಟರ್ಡಮ್ಮದ ಆಗ್ನೇಯಕ್ಕೆ ೨೧ ಮೈಲಿನ ಮೇಲಿದೆ; ಇಲ್ಲಿ ಇಂಗ್ಲಂಡ, ಫ್ರಾನ್ಸ, ಸ್ಪೇನ ದೇಶಗಳ ನಡುವೆ ಒಪ್ಪಂದವಾಯಿತು (೧೭೧೩).

೧೭. ಡೆಟ್ಟಿಂಜೆನ್—ಇದು ಬವ್ಹೇರಿಯೆಯಲ್ಲಿ ಮೇನ ಹೊಳೆಯ ಮೇಲಿದ್ದ ಫ್ರಾಂಕ್ಫರ್ಟದ ಮೂಡಣಿಗೆ ೧೮ ಮೈಲಿನ ಮೇಲಿದೆ; ಇಲ್ಲಿ ಇಂಗ್ಲಂಡದ ೨ನೆಯ ಜಾರ್ಜನು ಫ್ರೆಂಚರನ್ನು ಸೋಲಿಸಿದನು (೧೭೪೩).

೧೮. ಎಕ್ಸಲಾಶಾಪೆಲ್ (ಏಚನ್)—ಇದು ಪ್ರಸ್ಸಿಯಾ ದೇಶದಲ್ಲಿ ಕಲೋನದ ನೈರುತ್ಯಕ್ಕೆ ೪೦ ಮೈಲಿನ ಮೇಲೆ ಬೆಲ್ಜಮ್ಮದ ಗಡಿಯಲ್ಲಿರುತ್ತದೆ; ಇಲ್ಲಿ ಫ್ರೆಂಚರಿಗೂ ಇಂಗ್ಲಿಷರಿಗೂ ಒಪ್ಪಂದವಾಯಿತು (೧೭೪೮).

೧೯. ಮಿಂಡೆನ್—ಇದು ಹ್ಯಾನೋವ್ಹರದ ಪಡುವಣಿಗೆ ೪೫ ಮೈಲಿನ ಮೇಲೆ ವೀಜರ ಹೊಳೆಯ ದಂಡೆಯಲ್ಲಿದೆ; ಇಲ್ಲಿ

ಯಾದ ಕಾಳಗದಲ್ಲಿ ಇಂಗ್ಲಿಷರು ಫ್ರೆಂಚರನ್ನು ಸೋಲಿಸಿದರು (೧೭೫೯).

೨೦. ಬ್ರೆಟನ್ನಿ— ಇದು ಫ್ರಾನ್ಸ ದೇಶದ ಪಶ್ಚಿಮದಂಡೆಯಲ್ಲೊಂದು ಪರಗಣೆ ಇತ್ತು; ಇಲ್ಲಿ ಇಂಗ್ಲಂಡದ ನೌಕಾಧಿಪನಾದ ಹಾಕನು ಫ್ರೆಂಚರ ಹಡಗುಪಡೆಯನ್ನು ಹಾಳುಮಾಡಿದನು (೧೭೫೯).

೨೧. ಬೋಸ್ಟನ್— ಇದು ಸಂಯುಕ್ತಸಂಸ್ಥಾನಗಳಲ್ಲಿ ಮಸಾಚುಸೆಟ್ಸದ ರಾಜಧಾನಿಯಾಗಿರುತ್ತದೆ; ಇಲ್ಲಿಯ ಜನರ ಇಂಗ್ಲಂಡದಿಂದ ಬಂದ ಚಹಾತುಂಬಿದ ಹಡಗನ್ನು ಬಾರಲು ಹಾಕಿದರು (೧೭೭೫).

೨೨. ಯಾರ್ಕಟೌನ— ಇದು ವ್ಹರ್ಜೀನಿಯೆಯಲ್ಲಿ ರಿಚ್ಮಂಡದ ಆಗ್ನೇಯಕ್ಕೆ ೫೦ ಮೈಲಿನ ಮೇಲಿದೆ; ಇಲ್ಲಿ ಇಂಗ್ಲಂಡದ ದಳವಾಯಿಯಾದ ಕಾರ್ನವಾಲೀಸದೊರೆಯು ೭೦೦ ದಂಡಾಳುಗಳೊಡನೆ ಅಮೇರಿಕದ ದಳವಾಯಿಯಾದ ಜಾರ್ಜ ವಾಸಿಂಗ್ಟನ್ನನಿಗೆ ಶರಣುಹೋದನು (೧೭೮೧. ಚ. ಸ. ೧ನೆಯ ಭಾಗ ಪುಟ ೧೨೭ ನೋಡಿರಿ).

೨೩. ಸಾರಾಟೋಗಾ— ಇದು ಸಂಯುಕ್ತ ಸಂಸ್ಥಾನಗಳೊಳಗೆ ನ್ಯೂಯಾರ್ಕ ಸಂಸ್ಥಾನದಲ್ಲಿದೆ. ಇಲ್ಲಿ ಇಂಗ್ಲಿಷರ ದಳವಾಯಿಯಾದ ಬರ್ಗೊಯನನು ಅಮೇರಿಕರಿಗೆ ಶರಣುಹೋದನು (೧೭೮೨).

೨೪. ಅಲೆಗ್ಝಾಂಡ್ರಿಯಾ— ಇದು ಇಜಿಪ್ತ ದೇಶದಲ್ಲಿ ನೈಲ ಹೊಳೆಯ ಪಶ್ಚಿಮಮುಖದಲ್ಲಿರುತ್ತದೆ. ಇದರ ಬಗ್ಗೆ ಚ. ಸ. ೨ನೆಯ ಭಾ. ೧೧೫ ಪು. ನೋಡಿರಿ.

೨೫. ಕಾಯರೊ— ಇದು ಇಜಿಪ್ತದ ರಾಜಧಾನಿಯು; ಅಲೆಗ್ಝಾಂಡ್ರಿಯಾದ ಆಗ್ನೇಯಕ್ಕೆ ೧೧೨ ಮೈಲಿನಮೇಲಿದೆ. ಇದರ ಬಗ್ಗೆ ಚ. ಸ. ೨ ಭಾ. ಪು. ೧೧೫ ನೋಡಿರಿ.

೨೬. ಅಬುಕೀರುಪಸಾಗರ— ಇದು ಇಜಿಪ್ತದಲ್ಲಿ ಅಲೆಗ್ಝಾಂಡ್ರಿಯಾದ ಮೂಡಣಿಗೆ ಅಬುಕೀರಕೋಟೆಗೂ ರೊಸೆಟ್ಟಾಯೆಂಬ ನೈಲ ಹೊಳೆಯ ಮುಖಕ್ಕೂ ನಡುವಿರುತ್ತದೆ;

ಇಲ್ಲಿಯಾದ ಹಡಗುಗಾಳಗದ ಬಗ್ಗೆ ಚ. ಸ. ೨ ಭಾ. ಪು. ೯೩ ನೋ.

೨೩. ಟ್ರಾಫಲ್ಗಾರಭೂಶಿರ—ಇದು ಸ್ಪೇನದೇಶದಲ್ಲಿ ಕೇಡೀಜದ ಆಗ್ನೇಯಕ್ಕೆ ೨೫ ವೈಲಿನ ಮೇಲಿದೆ; ಇಲ್ಲಿಯಾದ ಕಾಳಗದ ಬಗ್ಗೆ ಚ. ಸ. ೨ ಭಾ. ಪು. ೧೧೦-೧೧ ನೋ.

೨೮. ಆಸ್ಟರ್ಲಿಡ್ಜ—ಇದು ಆಸ್ಟ್ರಿಯಾದಲ್ಲಿ ವ್ಹಿಯಾನದ ಈಶಾನ್ಯಕ್ಕೆ ೩೦ ವೈಲಿನ ಮೇಲಿದೆ; ಇಲ್ಲಿಯಾದ ಕಾಳಗದ ಬಗ್ಗೆ ಚ. ಸ. ೨ ಭಾ. ಪು. ೧೧೩ ನೋ.

೨೯. ಜೆನಾ—ಇದು ಜರ್ಮನಿದೇಶದಲ್ಲಿ ಲಿಪ್ಸಿಕ್ಕದ ನೈರುತ್ಯಕ್ಕೆ ೫೦ ವೈಲಿನ ಮೇಲಿದೆ; ಇಲ್ಲಿಯಾದ ಕಾಳಗದ ಬಗ್ಗೆ ಚ. ಸ. ೨ ಭಾ. ಪು. ೧೧೮ ನೋ.

೩೦. ವ್ಹಿಮಿರಾ
೩೧. ವ್ಹಿಟ್ಟೋರಿಯಾ
೩೨. ಟುಲೂಜ
೩೩. ಲಿಪ್ಸಿಕ್

} ಈ ಸ್ಥಳಗಳ ಬಗ್ಗೆ ಚ. ಸ. ೨ ಭಾ. ಪು. ೧೩೫, ೧೪೦, ೧೪೧ ನೋಡಿರಿ.

೩೪. ಎಲ್ಬಾ—ಇದು ಇಟಲಿದೇಶದ ಪಶ್ಚಿಮಕ್ಕೆ ಕೋರ್ಸಿಕಾ ನಡುಗಡ್ಡೆ ಟಸ್ಕನಿಪ್ರಾಂತ ಇವುಗಳ ನಡುವೊಂದು ಚಿಕ್ಕ ನಡುಗಡ್ಡೆಯಿರುತ್ತದೆ; ಇಲ್ಲಿ ಯುರೋಪದ ಎಲ್ಲ ಅರಸರು ಕೂಡಿ ನೆಪೋಲಿಯನ್ ಬೊನಾಪಾರ್ಟನನ್ನಿಟ್ಟರು (೧೮೧೪).

೩೫. ವಾಟರ್ಲೂ—ಇದು ಬೆಲ್ಜಮ್ಮದಲ್ಲಿ ಬ್ರುಸೆಲ್ಸದ ತೆಂಕಣಿಗೆ ೧೦ ವೈಲಿನ ಮೇಲಿದೆ; ಇಲ್ಲಿಯು ಹೆಸರಾದ ಕಾಳಗದ ಬಗ್ಗೆ ಚ. ಸ. ೨. ಭಾ. ಪು. ೧೨೩ ನೋ.

೩೬. ಸೆಂಟಹೆಲಿನಾ—ಇದು ದಕ್ಷಿಣ ಅಟ್ಲಾಂಟಿಕ್ ಮಹಾಸಾಗರದಲ್ಲಿ ಆಫ್ರಿಕದ ದಂಡೆಯಿಂದ ೧೨೦೦ ವೈಲಿನ ಮೇಲೊಂದು ನಡುಗಡ್ಡೆಯದೆ; ಇಲ್ಲಿ ಯುರೋಪದ ಉಳಿದ ಅರಸರೊಪ್ಪಿಗೆಯಿಂದ ಇಂಗ್ಲಿಷರು ನೆಪೋಲಿಯನ್ ಬೊನಾಪಾರ್ಟನನ್ನು ಕಾವಲಲ್ಲಿರಿಸಿದರು (೧೮೧೬).

೩೬. ಜಹಿಹಿ (ಹಾವಯಿ)—ಇದು ದಕ್ಷಿಣ ಫಾಸಿಫಿಕ್ ಮಹಾ ಸಾಗರದಲ್ಲಿದ್ದ ಸ್ಯಾಂಡ್ವಿಚ್ಚ ನಡುಗಡ್ಡೆಗಳಲ್ಲಿಯೊಂದು ದೊಡ್ಡ ನಡುಗಡ್ಡೆಯು; ಇಲ್ಲಿ ಮೂರು ಸಾರೆ ಭೂಪ್ರದಕ್ಷಿಣೆಯನ್ನು ಮಾಡಿದ ಕುಕ್ಕನೆಂಬ ಗೃಹಸ್ಥನು ಕೊಲ್ಲಲ್ಪಟ್ಟನು.

೩೭. ನೇವ್ಹೆರಿನೊ— ಇದು ಗ್ರೀಸ ದೇಶದೊಳಗೆ ಮೋರಿಯಾದ ನೈರುತ್ಯದಲ್ಲಿ ಒಂದು ದೊಡ್ಡ ಬಂದರವದೆ. ಇಲ್ಲಿ ಇಂಗ್ಲಿಷರ ನೌಕಾಧಿಪನಾದ ಕಾಡ್ರಿಂಗ್ಟನ್ನನು ತುರ್ಕರ ಹಡಗುಪಡೆಯನ್ನು ನಾಶಮಾಡಿದನು (೧೮೨೭).

೩೮. ಹಾಂಗಕಾಂಗ—ಇದು ಕಂಟಾನ ಹೊಳೆಯ ಮುಖದಲ್ಲೊಂದು ನಡುಗಡ್ಡೆಯದೆ; ಇದನ್ನು ಇಂಗ್ಲಿಷರು ೧೮೪೨ರಲ್ಲಿ ತೆಗೆದುಕೊಂಡರು.

೩೯. ಸಿನೋಪ—ಇದು ಕಪ್ಪುಸಮುದ್ರದಲ್ಲಿ ಏಸಿಯಾಖಂಡದ ತುರ್ಕಸ್ಥಾನದ ದಂಡೆಯಮೇಲೊಂದು ಬಂದರವದೆ; ಇಲ್ಲಿ ರೂಸರು ೫೦೦೦ ಮಂದಿ ತುರ್ಕರನ್ನು ಕೊಂದುಹಾಕಿದರು (೧೮೫೪).

೪೦. ಒಡೆಸಾ—ಇದು ರಶಿಯಾದಲ್ಲಿ ನೀಸ್ಟರ ಹೊಳೆಯ ಮುಖದ ಹತ್ತರ ಒಂದು ಬಂದರವದೆ; ಇದನ್ನು ಇಂಗ್ಲಿಷ ಫ್ರೆಂಚ ಹಡಗುಪಡೆಯವರು ಹಿಡಿದುಕೊಂಡರು (೧೮೫೪)

೪೧. ಸಿಲಿಸ್ಟ್ರಿಯಾ—ಇದು ತುರ್ಕಸ್ಥಾನದಲ್ಲಿ ಡಾನ್ಯೂಬ ಹೊಳೆಯ ದಂಡೆಯಮೇಲೊಂದು ಪಟ್ಟಣವದೆ; ರೂಸರು ಇದನ್ನು ಹಿಡಿದುಕೊಳ್ಳಲಿಕ್ಕೆ ಮಾಡಿದ ಯತ್ನವು ನಿಷ್ಫಲವಾಯಿತು (೧೮೫೪).

೪೨. ಅಲ್ಮಾ—ಇದು ಕ್ರಿಮಿಯಾ ದ್ವೀಪಕಲ್ಪದಲ್ಲಿಯೊಂದು ಸಣ್ಣ ಹೊಳೆಯದೆ. ಇದರ ದಂಡೆಯಮೇಲೆ ಇಂಗ್ಲಿಷ ಫ್ರೆಂಚರು ರೂಸರನ್ನು ಸೋಲಿಸಿದರು (೧೮೫೪).

೪೩. ಬಾಲಕ್ಲಾವಾ—ಇದು ಕ್ರಿಮಿಯಾದಲ್ಲಿ ಸಿಬಾಸ್ಟಪೂಲದ ತೆಂಕಣಿಗೆ ೬ ಮೈಲಿನಮೇಲೊಂದು ಬಂದರವದೆ; ಇಲ್ಲಿಯಾದ ಕಾಳಗದಲ್ಲಿ ರೂಸರು ಸೋತರು (೧೮೫೪).

೪೪. ವಿಟೆನ್ಬರ್ಗ್— ಇದು ಜರ್ಮನಿ-ದೇಶದೊಳಗೆ ಸಾಕ್ಸನಿ ಪ್ರಾಂತದಲ್ಲಿದೆ; ಇಲ್ಲಿ ಮಾರ್ಟಿನ್ ಲೂಥರನ ಶಿಷ್ಯರು ಟೆಜ್ಜೆಲ್ಲನ ಪುಸ್ತಕವನ್ನು ಸುಡಿಸಿದರು.

೪೫. ಬ್ರೆಸ್ಟ್—ಇದು ಫ್ರಾನ್ಸದ ಪಶ್ಚಿಮದಲ್ಲಿಯೊಂದು ಬಂದರವಿದೆ. ತನ್ನ ಕಡೆಯುವರು ಹಿಂಜರೆದದ್ದನ್ನು ಕಂಡು ಇಂಗ್ಲಂದದ ಅರಸನಾದ ಜೇಮ್ಸನು ಇಲ್ಲಿಗೆ ಬಂದನು.

೪೬. ಲೀಜ—ಇದು ಬೆಲ್ಜಿಯಮ್ಮದಲ್ಲಿ ಅದೇ ಹೆಸರಿನ ಪರಗಣೆಯುಲ್ಲಿಯೊಂದು ಪಟ್ಟಣವದೆ; ಇದನ್ನು ೧೭೦೨ರಲ್ಲಿ ಜಾನ ಚರ್ಚಿಹಿಲ್ಲನು ಹಿಡಿದುಕೊಂಡನು.

೪೭. ನೇವ್ಹಿಸ—ಈ ಸುಂದರವಾದ ಮತ್ತು ಬೆಳೆಯುಳ್ಳ ನಡುಗಡ್ಡೆಯು ವೇಸ್ಟ್ಇಂಡೀಜದಲ್ಲಿದೆ. ಇಲ್ಲಿರುವಾಗ ನೇಲ್ಸನ್ನನು ತುಡುಗಿನಿಂದ ವ್ಯಾಪಾರಮಾಡುವ ಅಮೇರಿಕರ ಹಡಗುಗಳನ್ನು ಅಲ್ಲಿಯ ಬಂದರದಿಂದ ಹೊರಗೆ ಹಾಕಿಸಿದನು.

೪೮. ಮಾಲಫ್ಲಾಕ್ವೆಟ್—ಇದು ಫ್ರಾನ್ಸದಲ್ಲಿಯೊಂದು ಹಳ್ಳಿಯುದೆ; ಇಲ್ಲಿ ಇಂಗ್ಲಿಷರ ಕಡೆಯುವನಾದ ಮಾರ್ಲಬರೊದಡ್ಯೂಕನು ಫ್ರೆಂಚರ ಕಡೆಯುವನಾದ ವ್ಹಿಲ್ಲರ್ಸನನ್ನು ಗೆದ್ದನು (೧೭೦೯).

೪೯. ಲುನೆವ್ಹಿಲಿ—ಇದು ಫ್ರಾನ್ಸ ದೇಶದಲ್ಲಿಯೊಂದು ಹಳ್ಳಿಯುದೆ; ಇಲ್ಲಿ ಅಸ್ಟ್ರಿಯದ ಬಾದಶಹನು ಸೆಪ್ರೋಲಿಯನ್ನನೊಡನೆ ಒಪ್ಪಂದ ಮಾಡಿಕೊಂಡನು. (೧೮೦೧)

೫೦. ಅಜೇಸಿಯೊ—ಇದು ಫ್ರಾನ್ಸಕ್ಕೆ ಸೇರಿದ ಕೋರ್ಸಿಕಾ ನಡುಗಡ್ಡೆಯ ಪಶ್ಚಿಮದಲ್ಲಿರುತ್ತದೆ; ಇಲ್ಲಿ ಹೆಸರಾದ ನೆಪ್ರೋಲಿಯನ್ ಬೊನಾಪಾರ್ಟನು ಹುಟ್ಟಿದನು (೧೭೬೯).

---

## ಪರಿಶಿಷ್ಟ (ಇ.)

### ಪ್ರಶ್ನೆಗಳು.

೧ ೧ನೆಯ ಜೇಮ್ಸನಿಗೆ ಇಂಗ್ಲಂಡದ ಪಟ್ಟವೇರುವ ಹಕ್ಕು ಹೇಗೆ ಬಂತು? ಇದನ್ನು ವಂಶಾವಳಿಯಿಂದ ವ್ಯಕ್ತವಾಗಿ ತೋರಿಸಿರಿ.

೨ ೧ನೆಯ ಜಾರ್ಜನ ಕಾಲದಲ್ಲಿಯಾದ ಮುಖ್ಯ ಸಂಗತಿಗಳನ್ನು ಬರೆಯಿರಿ.

೩ ಕೆಳಗೆ ಬರೆದ ಪುರುಷರ ವಿಷಯವಾಗಿ ನಿಮಗೆ ಗೊತ್ತಿದ್ದುದನ್ನು ಇಸವಿ ಸಹಿತ ಸಂಕ್ಷೇಪದಿಂದ ಬರೆಯಿರಿ.
ಉಯಿಲ್ಯಮ್ ವಾಲೀಸ, ರಾಬರ್ಟಸೀಸಿಲ, ಪರಕಿನ್ನವಾರ್ಬೆಕ್ಕ, ಸರ ವಾಲ್ಟರ ರಾಲೆ, ಮಾರ್ಲಬರೊದ ಡ್ಯೂಕ, ರಾಬಿನ್ನ ಹುಡ್ಡ.

೪ ಎಂದು ಆರ ನಡುವೆ ಕೆಳಗೆ ಬರೆದ ಕಾಳಗಗಳು ಆದವು ಮತ್ತು ಅವುಗಳಲ್ಲಿ ಆವಪಕ್ಷದವರಿಗೆ ಜಯಪ್ರಾಪ್ತವಾಯಿತು?:-
ಟ್ರಾಫಲ್‌ಗಾರ, ವಾಟರ್ಲೂ, ಬ್ಲೆನ್‌ಹೀಮ್, ಹಾಲಿಡೊನ್ನ ಮರಡಿ, ಟ್ಯೂಕ್ಸಬರಿ, ನೇಸಬಿ.

೫ ಕೆಳಗೆ ತೋರಿಸಿದ ಸಂಗತಿಗಳ ಕಾರಣಗಳನ್ನು ವಿವರಿಸು—
(ಅ) ೨ನೆಯ ಜೇಮ್ಸನನ್ನು ಪಟ್ಟದಿಂದ ತಳ್ಳಿದ್ದು.
(ಬ) ೧ನೆಯ ಚಾರ್ಲ್ಸನಿಗೂ ಪ್ರಜಾಸಭೆಯವರಿಗೂ ಆದ ಯುದ್ಧ.
(ಕ) ಧರ್ಮಕ್ರಾಂತಿ.
(ಡ) ಗುಲಾಬಿಯ ಯುದ್ಧ (ವಾರಸ್ ಆಫ ರೋಜೆಸ್)

೬ ಕೆಳಗೆ ಬರೆದವುಗಳು ಏನವೆ? ಆವ ಪರಗಣೆಗಳಲ್ಲಿ ಅವೆ? ಮತ್ತು ಏತಕ್ಕೆ ಹೆಸರಾಗಿವೆ?

ಲೀಡ್ಸ, ನ್ಯೂಕಾಸಲ್, ಬ್ರಿಸ್ಟಲ್, ಚೆಲ್ಟನ್ನಹ್ಯಾಮ, ಏಂಡರಮಿಯರ, ಫಾಯಿಪನೆಸ್, ಗ್ಲಾಸಗೊ, ಸೆಂಟಂಡ್ರೂಜ, ಬಾಲಾ, ಬ್ಲ್ಯಾಕವಾಟರ.

೭ ಸ್ಕಾಟಲಂಡದಲ್ಲಿರುವ ಮುಖ್ಯ ಪಟ್ಟಣಗಳಾವವು? ಅವು ಆತರ ಸಲುವಾಗಿ ಹೆಸರಾಗಿವೆ? ಸ್ಕಾಟಲಂಡದಲ್ಲಿ ಆವಾವ ಸರಕುಗಳು ಹುಟ್ಟುತ್ತವೆ?

೯ ಗ್ರೇಟಬ್ರಿಟನ್ನದ ನಕಾಶವನ್ನು ತೆಗೆದು ಅದರಲ್ಲಿ ಮುಖ್ಯ ವಾದ ಬಂದರಗಳನ್ನೂ ನದಿಗಳನ್ನೂ ವ್ಯಾಪಾರದ ಪಟ್ಟಣಗಳನ್ನೂ ಬರೆಯಿರಿ.

೯. ಪರನಾಡುಗಳಿಂದ ಇಂಗ್ಲಂಡಕ್ಕೆ ಅವಾವ ಸರಕುಗಳು ಅವಾವ ದೇಶದಿಂದ ಬರುತ್ತವೆ?

೧೦ ಅಯರ್ಲಂಡದ ಮುಖ್ಯ ಸರೋವರಗಳನ್ನೂ ಸ್ಕಾಟ ಲಂಡದ ದಂಡೆಯ ದ್ವೀಪಗಳನ್ನೂ ವೇಲ್ಸದ ಭೂಶಿರಗಳನ್ನೂ ಇಂ ಗ್ಲಂಡದ ಪರ್ವತಗಳನ್ನೂ ಬರೆಯಿರಿ.

---

೧೧ ದೊಡ್ಡ ಅಲ್ಫ್ರೆಡ್, ಊಲ್ಸೆ, ಕ್ರಾಮವೆಲ್ಲ, ಇವರ ಚರಿತ್ರ ಗಳನ್ನು ಬರೆಯಿರಿ.

೧೨ ಎಂಟನೆಯ ಹೆನ್ರಿ ಅಥವಾ ಎಲಿಜಾಬೆಥ ಇವರ ಆಳಿಕೆಯ ಲ್ಲಿ ನಡೆದ ಮುಖ್ಯ ಸಂಗತಿಗಳನ್ನು ಬರೆಯಿರಿ.

೧೩ ಧರ್ಮಕ್ರಾಂತಿಯ ಬಗ್ಗೆ ನಿಮಗೆ ಗೊತ್ತಿದ್ದದನ್ನು ಬ ರೆಯಿರಿ.

೧೪ ದೊಡ್ಡ ಸನದು, ಹಕ್ಕಿನ ಅರ್ಜಿ ಇವುಗಳು ಏಕೆ ಎಂ ದು ಆದವು? ಮತ್ತು ಇವುಗಳಲ್ಲಿರುವ ಕಲಮುಗಳಾವವು?

೧೫. ಇಂಗ್ಲಂಡದೇಶದ ನಕಾಶವನ್ನು ತೆಗೆದು ಅದರಲ್ಲಿ ದೊ ಡ್ಡ ದೊಡ್ಡ ಪಟ್ಟಣಗಳನ್ನೂ ಕೊಳೆಗಳನ್ನೂ ಬರೆಯಿರಿ.

೧೬. ಬ್ಲಾಯಿ, ಟೈಬರ್ನ, ಫಾಂಫ್ರೆಟ್, ಅಜಿಂಕೋರ್ಟ, ಬಾರ್ನ ಟ್, ಪಿಂಕೀ, ನೇಸಬಿ, ಡನ್‌ಬಾರ, ಪೋರ್ಟಲಂಡ, ಟ್ವೀಡ, ಡಂ ಡೀ, ಗ್ಲಾಸಗೊ, ಯಾರ್ಮೌಥ, ಲಾನಾರ್ಕ, ಓಟ್ರ್ಯಾಮ, ಇವು ಎಲ್ಲಿ ಏನು ಇರುತ್ತವೆ? ಮತ್ತು ಏತರ ಬಗ್ಗೆ ಹೆಸರಾಗಿವೆ?

೧೭ ಉಣ್ಣೆಯ ಅರಿವೆ, ಕಬ್ಬಿಣಸಾಮಾನು, ವಿದ್ಯಾಲಯ ಇ ವುಗಳ ಸಂಬಂಧದಿಂದ ಹೆಸರಾದ ಊರುಗಳನ್ನು ಬರೆಯಿರಿ.

೧೮. ಇಂಗ್ಲಂಡ ಸ್ಕಾಟಲಂಡ ದೇಶಗಳಲ್ಲಿರುವ ಸರೋವರಗಳ ನ್ನೂ ಹೊಳೆಗಳನ್ನೂ ಬರೆಯಿರಿ.

---

೧೯. ಸ್ಕಾಟ್ಲಂಡದ ನಕಾಶವನ್ನು ತೆಗೆದು ಅದರಲ್ಲಿ ದೊಡ್ಡ ದೊಡ್ಡ ಪಟ್ಟಣಗಳನ್ನೂ ಹೊಳೆಗಳನ್ನೂ ಪರ್ವತಗಳನ್ನೂ ಬರೆಯಿರಿ.

೨೦. ಥರ್ಸೊರ್ಗ, ಟೀನ, ಪೋರ್ಟ್ರೀ, ಫಾರೆಸ್, ಹಂಟಲಿ, ಪೊಂಟಿರ್ರೋಜ, ಡನ್ಫರ್ಮಲಾಯಿನ, ಅರ್ರೊವಾ, ಹೆಲೆನ್ಸಬರ್ಗ, ರಾಥಸೆ, ಡಾಲ್ಕೀಥ, ಕೋಲ್ಡ್ಸ್ಟ್ರೀಮ, ಗಾಲಾಸೀಲ್ಸ, ಹ್ಯಾಮಿಲ್ಟನ್, ಕಿಲ್ಮರ್ನಾಕ್ಕ, ಕ್ಯಾಸಲ್‌ಡಗ್ಲಾಸ ಇವು ಅವಾವ ಪರಗಣೆಗಳಲ್ಲಿರುತ್ತವೆ?

೨೧. ಸ್ವಾನ್ಸೀ, ಉಯಿಂಡ್ಸರ, ಹ್ಯಾಲಿಫಾಕ್ಸ, ಕಿಡ್ಡರಮಿನಿಸ್ಟರ, ಚೇಥಾಮ, ಬ್ರಾಯಟನ್, ಗ್ರಿನಾಕ್, ಅಬರ್ಡೀನ, ಬೆನಾಕ್ಬರ್ನ ಇವು ಎಲ್ಲಿ ಅವೆ? ಮತ್ತು ಏತಕ್ಕೋಸ್ಕರ ಹೆಸರಾಗಿವೆ?

---

೨೨. ದೊಡ್ಡ ಅಲ್ಫ್ರೆಡ್, ಊಲ್ಸೆ, ಥಾಮುಸಅಬೆಕೆಟ್, ಕ್ರಾಮವೆಲ್ಲ ಇವರ ಚರಿತ್ರಗಳನ್ನು ಬರೆಯಿರಿ.

೨೩. ಇಂಗ್ಲಂಡ ಮತ್ತು ಹಿಂದುಸ್ಥಾನ ಈದೇಶಗಳ ರಾಜ್ಯಪದ್ಧತಿಗಳಲ್ಲೇನೇನು ಹೆಚ್ಚುಕಡಿಮೆಯುಂಟು?

೨೪. ಪ್ರಜಾಸಭೆಯೆಂದಿನಿಂದಾರಂಭವಾಯ್ತು? ಅವಾವಾಳಿಕೆಗಳಲ್ಲಿ ಅವಾವ ಹೊಸ ಅಧಿಕಾರಗಳು ಈಸಭೆಗೆ ಸಿಕ್ಕವು.

೨೫ ಇಲಿಜಾಬೆಥ ರಾಣಿಯು ಕಾಲಕೀರ್ತಿಯಲ್ಲಿ ನಡೆದ ಮುಖ್ಯಸಂಗತಿಗಳನ್ನು ವಿವರಿಸು.

೨೬. ಬೆನಾಕ್‌ಬರ್ನ, ಹೇಸ್ಟಿಂಗ್ಸ, ಸ್ಟ್ಯಾಂಡರ್ಸ, ಬಾರ್ನೆಟ್, ಇವ್ಹಿಶ್ಯಾಮ, ಪಾಯಟಿಯರ್ಸ, ಅಜಿಂಕೋರ್ಟ, ಬ್ಲೆನ್‌ಹೀಮ, ಪ್ರೆಸ್ಟನ್‌ಪ್ಯಾನ್ಸ, ಟ್ರಾಫಲ್ಗಾರ, ಈ ಕದನಗಳೆಂದು ಆರ ನಡುವೆ ಆದವು ಮತ್ತು ಆರಿಗೆ ಗೆಲವು ಬಂತು?

೨೭ ಸನ್ ೧೦೬೬ನೆಯ ಇಸವಿಯಿಂದ ಇಂದಿನ ವರೆಗೆ ಇಂಗ್ಲಂಡದಲ್ಲಿ ಆವಾವ ಮನೆತನದವರು ರಾಜ್ಯವನ್ನಾಳಿದರು? ಆವ ಇಸವಿಯಿಂದ ಆವ ಇಸವಿಯ ವರೆಗೆ ಅವರು ರಾಜ್ಯವಾಳಿದರು?

೨೮ ಇಂಗ್ಲಂಡದಲ್ಲಿ ಮೊದಲು ಸರದಾರರ ಅಧಿಕಾರವು ಪ್ರಬಲವಾದುದು ಹೇಗೆ ನಷ್ಟವಾಯಿತು? ಮತ್ತು ಮುಂದೆ ಪ್ರಜರು ತಮ್ಮ ಸ್ವಾತಂತ್ರ್ಯವನ್ನು ಹೇಗೆ ಬೆಳೆಸಿದರು?

೨೯ ಹಿಂದುಸ್ಥಾನದಲ್ಲಿ ಇಂಗ್ಲಿಷರಿಗೆ ರಾಜ್ಯಾಧಿಕಾರವು ಪ್ರಾಪ್ತವಾದಂದಿನಿಂದ ಹಿಂದುಸ್ಥಾನದ ರಾಜ್ಯವ್ಯವಸ್ಥೆಯಲ್ಲಿ ಆವಾವ ಹೆಚ್ಚುಕಡಿಮೆಗಳಾದವು? ಮತ್ತು ಅವಾವಾವ ಇಂಗ್ಲಿಷ ಅಧಿಕಾರಿಗಳ ಕಾಲಕೀರ್ತಿಯಲ್ಲಿಯಾದವು?

೩೦ ಸ್ಪೇನದ ಸೋಲಿಲ್ಲದ ಹಡಗುಪಡೆ, ಅಮೇರಿಕದ ಸ್ವಾತಂತ್ರ್ಯ, ನೆಲಸನ್, ಲಾರ್ಡಕಾರ್ನವಾಲೀಸ ಇವರ ವೃತ್ತಾಂತವನ್ನು ಬರೆಯಿರಿ.

೩೧ ಪ್ರಜಾಸಭೆಯಸ್ಥಾಪನೆ, ರಾಜ್ಯಕ್ರಾಂತಿ, ಯೂಟ್ರೆಕ್ಟದ ಒಪ್ಪಂದ, ಇಂಗ್ಲಿಷ ಮತ್ತು ಸ್ಕಾಚ್ ಪ್ರಜಾ ಸಭೆಗಳ ಕೂಡುವಿಕೆ, ಮೇರಿಸ್ಟುವಾರ್ಟಳ ಶಿರಚ್ಛೇದ, ತರುಣ ಮೋಸಕಾರನ ಅಪಜಯ, ಪ್ರಜಾಸಭೆಯ ತಿದ್ದುವಿಕೆಯ ಕಾನೂನು, ಮಹಾರಾಣಿಯವರು ಕೇಸರಹಿಂದ ಎಂಬ ಬಿರುದು ಧರಿಸಿದ್ದು ಇವು ಎಂದಾದವು?

೩೦. ಸ್ಕಾಟಲಂಡದಮೇರಿ, ಜಾನ, ಇವರ ಚರಿತ್ರಗಳನ್ನು ಬರೆಯಿರಿ.

೩೩. ೫ನೆಯ ಹೇನ್ರಿಯಾಳಿಕೆಯಲ್ಲಿ ನಡೆದ ಸಂಗತಿಗಳನ್ನು ಬರೆಯಿರಿ.

೩೪. ಧರ್ಮಯುದ್ಧವೆಂದರೇನು? ಒಟ್ಟು ಎಷ್ಟು ಧರ್ಮಯುದ್ಧಗಳಾದವು? ಅವುಗಳಲ್ಲಿ ಮುಖ್ಯವಾದವುಗಳಾವವು?

೩೫. ಗ್ರೇಟಬ್ರಿಟನ್ನದ ಈಗಿನ ರಾಜ್ಯಪದ್ಧತಿಯಾವ ಪ್ರಕಾರದ್ದಿರುತ್ತದೆ? ಈ ಸ್ಥಿತಿಯನ್ನು ಅದಾವಕ್ರಮದಿಂದ ಹೊಂದಿತು? ಆದಕ್ಕಾಗಿ ಜನರು ಮಾಡಿದ ಪ್ರಯತ್ನಗಳನ್ನೂ ಸರಕಾರದಿಂದ ಮಾಡಲ್ಪಟ್ಟ ಕಟ್ಟಳೆಗಳನ್ನೂ ವರ್ಷಾನುಕ್ರಮದಿಂದ ವಿವರಿಸು.

೩೬. ಕೆಳಗೆ ಬರೆದವರಲ್ಲಿ ಮುವ್ವರ ಚರಿತ್ರಗಳನ್ನು ಬರೆಯಿರಿ:- ವಿಜಯಿಯೊಉಯಿಲ್ಯಮ್, ಜಾನವಿಕ್'ಲೀಫ, ಸ್ಕಾಟಲಂಡದ ರಾಣಿಯಾದ ಮೇರಿ, ಆರ್ಕದಜೋನಳು, ಜೇಕನ್ನ, ಸರಪ್ರಾನ್ಸಿಸಡ್ರೇಕ್, ೨ನೆಯ ಮೋಸಗಾರ, ನೆಲ್ಸನ್.

೩೭ ಇಂಗ್ಲಂಡದಲ್ಲಿಯೇ ಇದ್ದು ಹಿಂದುಸ್ಥಾನದ ರಾಜ್ಯಭಾರ ನೋಡಲಿಕ್ಕೆ ನಿಯಮಿಸಲ್ಪಟ್ಟ ಅಧಿಕಾರಸ್ಥರಾರು? ಅವರೆಷ್ಟು ಮಂದಿ? ಅವರ ಕಡೆಗಿರುವ ಅಧಿಕಾರವೇನು?

೩೯. ಅಮೇರಿಕದ ಸ್ವಾತಂತ್ರ್ಯದ ಸಂಬಂಧದಿಂದಾದ ಯುದ್ಧದ ಕಾರಣಗಳನ್ನೂ ಅಗ್ಗೆ ನಡೆದ ಕಾಳಗಗಳನ್ನೂ ಕಡೆಗಾದ ಒಪ್ಪಂದದ ಕಲಮುಗಳನ್ನೂ ಬರೆಯಿರಿ

೩೯. ಯೂಟ್ರೆಚ್, ಮಾಡ್ರಿಡ್, ಎಕ್ಸಲಾಶಾಪೆಲ್, ಪಾರೀಸ ಈ ಒಪ್ಪಂದಗಳೆಂದಾದವು? ಆರೊಳಗೆ? ಇವುಗಳಿಂದಾವಾವ ಯುದ್ಧಗಳು ಮುಗಿದವು? ಇವುಗಳ ಕಲಮುಗಳಾವವು.

೪೦. ಕೆಳಗೆ ಬರೆದ ವರುಷಗಳಲ್ಲಿಯಾವಾವ ಸಂಗತಿಗಳು ವರ್ತಿಸಿದವು?

೪೧೦, ೧೦೦೨, ೧೧೩೯, ೧೧೭೨, ೧೩೯೧, ೧೪೪೫, ೧೪೭೪, ೧೭೦೩, ೧೭೦೧, ೧೯೩೩.

೪೧. ಅಯರ್ಲಂಡದಲ್ಲಿರುವ ಮುಖ್ಯ ಪಟ್ಟಣಗಳಾವವು? ಅವು ಮತ್ತೇತರ ಸಲುವಾಗಿ ಹೆಸರಾಗಿವೆ? ಅಯರ್ಲಂಡದಲ್ಲಿಯಾವಾವ ಸರಕುಗಳು ಹುಟ್ಟುತ್ತವೆ?

೪೨. ನೆನ್, ಬಾಯಿನ್, ಲಿಫಿ, ಟ್ವೀಡ, ಕ್ಲೈಡ, ಅರ್ನ ಈ ನದಿಗಳೆಲ್ಲಿ ಹುಟ್ಟಿಎಲ್ಲಿಗೆ ಹೋಗಿ ಕೂಡುತ್ತವೆ?

೪೩ ಕೆಳಗೆ ಬರೆದ ಪಟ್ಟಣಗಳೇತರ ಸಲುವಾಗಿ ಹೆಸರಾಗಿವೆ? ಬರ್ಮಿಂಗ್ಹ್ಯಾಮ್, ಮಾಂಚೆಸ್ಟರ, ಸೆಫೀಲ್ಡ, ಬ್ರಾಯಿಟನ್, ಲೀಸ್ಟರ, ಊರ್ಸ್ಟರ, ಪೋರ್ಟ್ಸ್ಮೌಥ, ಓಲ್ಡಹ್ಯಾಮ, ಆಕ್ಸಫರ್ಡ, ಪೆಂಬ್ರೋಕ, ಕಾರ್ಡಿಫ, ಹಾಲಿಫಾಕ್ಸ, ಕಾವೆಂಟ್ರಿ.

೪೪. ಇಂಗ್ಲಂಡದ ನಕಾಶವನ್ನು ತೆಗೆದು ಮೇಲೆ ಬರೆದ ಪಟ್ಟಣಗಳನ್ನೂ ಟೇಮ್ಸ, ಹಂಬರ, ಸೆವ್ಹರ್ನ ನದಿಗಳನ್ನೂ ತೋರಿಸು.

೪೫. ಕೆಳಗೆ ಕೊಟ್ಟ ಸ್ಥಳಗಳೆಲ್ಲಿವೆ ಮತ್ತು ಏತಕ್ಕೆ ಹೆಸರಾಗಿವೆ?:- ಪಿಂಕಿ, ಸ್ಟೋಕ, ಬಾಸ್ಟರ್ಟ, ಶ್ರೂಸಬರಿ, ಪಾಯಿಟಯರ್ಸ, ನ್ಯೂಯಾರ್ಕ, ಕ್ಯಾಂಟರ್ಬರಿ, ಬ್ಲಾಯು, ಬ್ರುನಾನಬರ, ಅಥಲ್ನೆ ಲೀಡ್ಸ, ಕಾವೆಂಟ್ರಿ, ವಾಲ್ಸಾಲ, ಲಿಮರಿಕ್, ಡಂಗರ್ವ್ಹನ್, ಲಿಸ್ಬರ್ನ.

೪೬. ಈ ದೇಶದ ವ್ಯಾಪಾರೋದ್ಯೋಗಗಳನ್ನು ಇಂಗ್ಲಂಡದ ವ್ಯಾಪಾರೋದ್ಯೋಗಗಳಿಗೆ ಸರಿಮಾಡಿ ತೋರಿಸು.

೪೭. ಇಂಗ್ಲಂಡದ ನಕಾಶವನ್ನು ತೆಗೆದು ಕೆಳಗೆ ಬರೆದವುಗಳನ್ನು ತಕ್ಕ ಸ್ಥಳದಲ್ಲಿ ಬರೆಯಿರಿ:- ಹೇಸ್ಟಿಂಗ್ಸ, ಟ್ಯೂಕ್ಸಬರಿ, ಶ್ರೂಸಬರಿ, ಬಾಸ್ವರ್ಥ, ನೇಸಬಿ, ಊರ್ಸ್ಟರ, ಶರಿಫಮೂರ, ಪ್ರೆಸ್ಟನ್ನ, ಡರ್ಬಿ ಪರಗಣೆ, ಪುನ್ಮೌಥ ಪರಗಣೆ, ಲಿಂಕನ್ನ ಪರಗಣೆ, ಊಜ, ಸ್ನೋಡನ್, ವ್ಹಾಯಿಟಿ, ಪೋರ್ಟಸ್ಮೌಥ, ಉಯಿಂಡ್ಸರ, ಮ್ಯಾಕಲ್ಸಫೀಲ್ಡ.

೪೮. ಅಜಿಂಕೋರ್ಟ, ಕಲೊಡನ್, ಡೆಟ್ಟಿಂಜನ್, ಮೆಲ್ಪ್ಲೂಬರ್ನ, ನೇವ್ಹೊರಿನೊ, ಅಲೆಗ್ಝಾಂಡ್ರಿಯಾ, ಏಕರ, ಇಂಕರಮನ್ನ, ಕಾರ್ಗಮುಕಾವು, ಸಿರಾಲಿಯೋನ, ಲಿಪ್ಸಿಕ್, ಕ್ವಿಬೆರ್ಕ ಇವೆಲ್ಲಿವೆ ? ಏತಕ್ಕೆ ಹೆಸರಾಗಿವೆ?

೪೯. ಇಂಗ್ಲಂಡದಲ್ಲಿ ಕಲ್ಲಿದ್ದಲಿ, ಕಬ್ಬಿಣಗಳೆಲ್ಲಿ ದೊರೆಯುತ್ತವೆ? ಹಡಗುಗಳನ್ನು ಕಟ್ಟುವ ಕಾರಖಾನೆಗಳೂ, ನೂಲುಣ್ಣೆಯು ವಸ್ತ್ರದ ಕಾರಖಾನೆಗಳೂ ಎಲ್ಲಿವೆ?

೫೦. ಭೂಮಧ್ಯ ಸಮುದ್ರದಲ್ಲಿಯೂ ಹಿಂದೀ ಮಹಾಸಾಗರದಲ್ಲಿಯೂ ಇಂಗ್ಲಿಷರ ವಶದಲ್ಲಿರುವ ದ್ವೀಪಗಳೂ ದೊಡ್ಡ ದೊಡ್ಡ ಬಂದರಗಳೂ ಆವವು?

೫೧. ಗ್ರೇಟಬ್ರಿಟನ್ನದ ನಕಾಶವ ತೆಗೆದು ಅದರಲ್ಲಿ ಮುಖ್ಯ ಪರ್ವತಗಳನ್ನೂ ವಿದ್ಯಾಲಯಗಳಿರುವ ಪಟ್ಟಣಗಳನ್ನೂ ಹಡಗುಪಡೆಗಳಿರುವ ಬಂದರಗಳನ್ನೂ ಸ್ಕಾಟಲಂಡದವರಿಗೂ ಇಂಗ್ಲಂಡದವರಿಗೂ ಆದ ಕಾಳಗಗಳ ಸ್ಥಳಗಳನ್ನೂ ತೋರಿಸಿರಿ.

೫೨. ಇಂಗ್ಲಂಡದಿಂದ ಹಿಂದುಸ್ಥಾನಕ್ಕೆ ಮತ್ತು ಹಿಂದುಸ್ಥಾನದಿಂದಿಂಗ್ಲಂಡಕ್ಕೆ ರಫ್ತಾಗುವ ಸರಕುಗಳಾವವು?

೫೩. ಆವಾವ ಬಕ್ಕಲಾದೂರುಗಳಿಂದ ಇಂಗ್ಲಿಷರಿಗಾವಾವ ಕಡಲುಗಳ ಮೇಲೆ ಸ್ವಾಮಿತ್ವವುಂಟಾಗಿದೆ?

೫೪. ಕೆಳಗೆ ಬರೆದವೇನಿವೆ? ಎಲ್ಲಿವೆ? ಏತಕ್ಕೆ ಹೆಸರಾಗಿವೆ? ೧ ಕ್ಯಾಂಟರ್ಬರಿ, ಸ್ವಾನ್ಸಿ, ಕಾರ್ಕ, ಜೆನ್‌ಸೆವ್ಹಿಸ್, ಮಾಲಿನ್‌ಹೆಡ್.

೫೫. ಗ್ರೇಟಬ್ರಿಟನ್ನದಲ್ಲಿಯೂ ಆಯರ್ಲಂಡದಲ್ಲಿಯೂ ಉಕ್ಕು

ಕಬ್ಬಿಣಗಳ ಯಂತ್ರಾದಿಗಳೂ ಇದ್ದಲಿಯ ಕಣಿಗಳೂ ಕಾಲುಚೀಲಗಳೂ ನೂಲಿನ ವಸ್ತ್ರಗಳೂ ಎಲ್ಲಿಯಾಗುತ್ತವೆ?

೫೬. ರಿಸ್ವಿಕ್‌, ಬ್ಲೆನ್ನಹೀಮ, ಸೆಜ್ಜಮೂರ, ಠಾಯುಹಾಸ, ಪ್ರೋರ್ಟಲಂಡ, ಕೆರಿಸ್‌ಬ್ರೂಕ, ಫಾದರಿಂಗೆ, ಪಿಂಕಿ, ಫ್ಲಾಡೆನ್ನ, ಸ್ಟೋಕ, ಬಾಸ್ವರ್ಥ, ಟ್ಯೂಕ್ಸಬರಿ, ಗ್ರೀನ್ವಿಚ್ಚ, ಬರ್ವಿಕ್ಕ, ಸಪರ್ಲಂಡ, ಚಲ್ಟನ್‌ಹ್ಯಾಮ್‌, ಮರ್ಥರತ್ತಿಡ್ವಿಲ ಇವೆಲ್ಲಿವೆ? ಏತಕ್ಕೆ ಹೆಸರಾಗಿವೆ?

೫೭. ಇಂಗ್ಲಂಡಕ್ಕೆ ಆವಾವ ಸರಕುಗಳು ಯಾವ ದೇಶಗಳಿಂದ ಬರುತ್ತವೆ?

೫೮. ಇಂಗ್ಲಂಡದ ನಕಾಶವನ್ನು ತೆಗೆದು ಎಲ್ಲ ಭೂಶಿರಗಳನ್ನೂ ಹೊಳೆಗಳನ್ನೂ ಅರಳೆಯ ವ್ಯಾಪಾರಕ್ಕೆ ಹೆಸರಾದ ಪಟ್ಟಣಗಳನ್ನೂ ತೋರಿಸು.

೫೯. ಇಂಗ್ಲಂಡದ ನಕಾಶವನ್ನು ತೆಗೆದು ಅದರಲ್ಲಿಲ್ಲ ಹೊಳೆಗುಡ್ಡಗಳನ್ನು ತೋರಿಸು.

೬೦. ಕೆಳಗೆ ಬರೆದವೇನವೆ? ಎಲ್ಲಿಯುವೆ? :—ಅಲ್ನವಿಕ್ಕ, ಕೆಸ್ವಿಕ್‌, ಗೆಟ್ಸಹೆಡ್‌, ಬೆರೋ, ಕಾಗ್ಲಿಂಟನ್ನ, ಮಚ್ಛವೆನ್ಲಾಕ್‌, ನ್ಯೂಪೋರ್ಟ, ರಾಚೆಸ್ಟರ, ಸಾಥಾವ್ಟನ್ನ, ವೀವಹಾಥ, ಪಂಜೆನ್ಸ, ಲವುಥ, ಕೇಡರ, ಪೆನಿಗಂಟ, ಟೀಜ, ಎಕ್ಸ, ಕೋಕೆ, ಡಂಜನ್ನೆಸ್‌, ಸೆಲ್ಸಿಯಾಬಿಲ್ಲ, ಮಿನಾಯಿ.

೬೧. ಕೆಳಗೆ ಕೊಟ್ಟ ಸ್ಥಳಗಳೇತಕ್ಕೆ ಹೆಸರಾಗಿವೆ? ಎಲ್ಲಿವೆ?:—ಡಡ್ಲೆ, ವಾಲ್ಸಾಲ, ಹೆಗ್ಹಮ, ಫಾದರಿಂಗೆ, ಬರ್ಕಲೆ, ಜೆಂಗಾರ, ಬಾಥ, ಚೆಲ್ಸಿಯಾ, ಸ್ವಾನ್ಸಿ, ಪೀಟರಬರೋ.

---

೬೨. ಸ್ಕಾಟಲಂಡದ ನಕಾಶವನ್ನು ತೆಗೆದು ಅದರಲ್ಲಿದ್ದ ಭೂಶಿರಗಳನ್ನೂ ಹೊಳೆಗಳನ್ನೂ ತೋರಿಸಿರಿ.

೬೩. ವೇಲ್ಸದ ನಕಾಶವನ್ನು ತೆಗೆದು ಅದರಲ್ಲಿ ದೊಡ್ಡ ಪಟ್ಟಣಗಳನ್ನು ಬರೆಯಿರಿ.

೬೪. ಕೆಳಗೆ ಬರೆದೂರುಗಳೆಲ್ಲಿವೆ? ಏತಕ್ಕೆ ಹೆಸರಾಗಿವೆ?:— ವಾಲ್ಸಾಲ, ಹೆಗ್ಘಾಮು, ಸ್ಟಾಂಫರ್ಡಬ್ರಿಜ್ಜ, ಮೊರ್ಸ್ಟರ್ನ್ಮೂರ, ಲವ್ರುಥ, ಬ್ರಾಯಿಟನ್ನ, ಅಪ್ಟನ್ನ, ಲಿನ್ನಲಿಥಗೋ, ಗ್ಲೆಂಕೋ, ಪೋಪ್ಯಾಟ್.

೬೫. ಅಯರ್ಲಂಡದಲ್ಲಿರುವ ಮುಖ್ಯ ಪಟ್ಟಣಗಳಾವವು? ಅವೇತಕ್ಕೆ ಹೆಸರಾಗಿವೆ? ;—ಅಯರ್ಲಂಡದಲ್ಲಾವಾವ ಸರಕುಗಳು ಹುಟ್ಟುತ್ತವೆ?

೬೬. ಶಾನನ್, ಬಾಯಿನ್, ಲಿಫಿ, ಟ್ವೀಡ, ಕ್ಲೈಡ, ಅರ್ನ ಈ ಹೊಳೆಗಳೆಲ್ಲಿ ಹುಟ್ಟಿ ಎಲ್ಲಿ ಹರಿಯುತ್ತವೆ?

೬೭. ಕೆಳಗೆ ಬರೆದ ಪಟ್ಟಣಗಳೇತಕ್ಕೆ ಹೆಸರಾಗಿವೆ?:—ಬರ್ಮಿಂಗ್ಹಾಮ್, ಮೆಂಚೆಸ್ಟರ, ಸೆಫಿಲ್ಡ, ಬ್ರಾಯಿಟನ್, ಲೀಸ್ಟರ, ಉರ್ಸ್ಟರ, ಪೋರ್ಟಸ್ಮಾಥ, ಓಲ್ಡಹ್ಯಾಮು, ಆಕ್ಸಫರ್ಡ, ಪೆಂಬ್ರೋಕ, ಕಾರ್ಡಿಫ, ಹಾಲಿಫಾಕ್ಸ, ಕಾವೆಂಟ್ರಿ.

೬೮. ಇಂಗ್ಲಂಡದ ನಕಾಶವನ್ನು ತೆಗೆದು ಮೇಲೆ ಬರೆದ ಪಟ್ಟಣಗಳನ್ನೂ ಟೇಮ್ಸ ಹಂಬರ ಮತ್ತು ಸೆವ್ಹರ್ನ ನದಿಗಳನ್ನೂ ತೋರಿಸು.

೬೯. ರನ್ನಿಮೀಡ, ಕ್ರೆಸಿ, ಅಜೆಂಕೋರ್ಟ, ನಾರ್ಥಲರ್ಟನ್ನ, ಹೆಗ್ಘಾಮ್, ಸೆನಲಾಕ್, ಇವೆಲ್ಲಿವೆ? ಏತಕ್ಕೆ ಹೆಸರಾಗಿವೆ?

೭೦. ಇಂಗ್ಲಂಡದಲ್ಲಾವಾವ ಖನಿಜಗಳೆಲ್ಲೆಲ್ಲಿ ಹುಟ್ಟುತ್ತವೆ? ಅಥವಾ ಇಂಗ್ಲಂಡ, ವೇಲ್ಸ, ಅಯರ್ಲಂಡಗಳಲ್ಲಿ ಕಾಳಗದ ಸ್ಥಳಗಳನ್ನು ಬರೆದು, ಅವು ಆರಾರಿಗೆಂದೆಂದಾದವು? ಮತ್ತು ಏನಾಯಿತು?

೭೧. ಅಯರ್ಲಂಡದಲ್ಲಿ ಕಲ್ಲಿದ್ದಲಿಗೂ ಇಂಗ್ಲಂಡದಲ್ಲಿ ವಿದ್ಯಾಲಯಗಳಿಗೂ ಹೆಸರಾದ ಊರುಗಳನ್ನು ಬರೆಯಿರಿ.

೭೨. ಇಂಗ್ಲಂಡದ ನಕಾಶವನ್ನು ತೆಗೆದು ವೇಕಫೀಲ್ಡ, ರಾಚೆಸ್ಟರ, ನಾರ್ವಿಚ್ಚ, ಮ್ಯಾನ್ಸಫೀಲ್ಡ, ಕಾವೆಂಟ್ರಿ, ಸ್ಯೂಬರಿ, ಹೋಲಿಹೆಡ್ಡ, ಪೀಕ, ಸ್ನೋಡನ್ನ, ಹಂಬರ, ಮೆಡ್ವೆ, ಕೆಸ್ವಿಕ್, ಸೆಪ್ಪಿ, ಅಲ್ಡರ್ನೆ, ಡಂಜನ್ನೆಸ್, ಸ್ಪರ್ನಹೆಡ್ಡ, ಟಾರ್ಬೆ ಇವುಗಳನ್ನು ಸರಿಯಾಗಿ ತೋರಿಸಿರಿ.

೭೩. ಕೆಳಗೆ ಬರೆದ ಪಟ್ಟಣಗಳೇತಕ್ಕೆ ಹೆಸರಾಗಿವೆ? ಲಂಡನ್ನ, ವಾಲ್ಸಾಲ, ಬರ್ವಿಕ್ಕ, ಹೆಗ್ಝ್ಹಮ್, ನಾರ್ಥೆಲರ್ಟನ್ನ, ಲವುಥ, ಮೆರ್ಥರತ್ರಿಡ್ವಿಲ್ಲ, ಸ್ವಾನ್ಸಿ.

೭೪. ಇಂಗ್ಲಂಡದಲ್ಲಿ ಆರಳೆಯ ವ್ಯಾಪಾರಕ್ಕೂ ಮಣ್ಣಿನ ಪಾತ್ರೆಗಳಿಗೂ ಹೆಸರಾದ ಊರುಗಳನ್ನು ಬರೆಯಿರಿ.

೭೫. ದೊಡ್ಡ ಸನದು, ಹೇಬಿಯಸ್‌ಕಾರ್ಪಸ್ ಕಾನೂನುಗಳೆಂದಾವವು? ಇವುಗಳ ಕಲಮುಗಳನ್ನು ಬರೆಯಿರಿ.

೭೬. "೮ನೆಯ ಹೇನ್ರಿಯಲ್ಲಿ ಯಾರ್ಕ ಲಾಂಕಾಸ್ಟರ ಮನೆತನಗಳು ಕೂಡಿದವು" ಈ ವಾಕ್ಯದರ್ಥವನ್ನು ವಂಶಾವಳಿಯನ್ನು ಕೊಟ್ಟು ವಿವರಿಸು.

---

೭೭. ಇಂಗ್ಲಂಡದ ಪ್ರಜಾಸಭೆಯೆಂದಿನಿಂದಾರಂಭವಾಯಿತು? ಆವಾವಾಳಿಕೆಗಳಲ್ಲಿ ಆವಾವ ಹೊಸ ಅಧಿಕಾರಗಳು ಈಸಭೆಗೆ ಸಿಕ್ಕವು?

೭೮. ಬೆನಾಕ್‌ಬರ್ನ ಹೇಸ್ಟಿಂಗ್ಸ ಸ್ಟಾಂಡರ್ಸ ಬಾರ್ನೆಟ್ ಇವ್ಹಿಶಾಮ ಪಾಯಿಟಿಯರ್ಸ ಅಜೆಂಕೋರ್ಟ ಬ್ಲೆನ್ನಹೀಮ ಪ್ರೆಸ್ಟನ್‌ಪ್ಯಾನ್ಸ ಟ್ರಾಫಲ್ಗಾರಗಳ ಕದನಗಳು ಎಂದು ಆರ ನಡುವೆ ಆದವು? ಮತ್ತು ಆರಿಗೆ ಗೆಲುವು ಬಂತು?

೭೯. ಆಲ್ಫ್ರೆಡ್ಡನು ಪ್ರಜೆಗಳ ಹಿತಕ್ಕೋಸ್ಕರ, ಆವಾವ ಹಂಚಿಕೆಗಳನ್ನು ಮಾಡಿದನು?

೮೦. ಫ್ರಾನ್ಸಿಸ್ ಬೇಕನ್ನ, ಆರ್ಕದ ಜೋನ, ಇವರ ಚರಿತ್ರಗಳನ್ನು ಬರೆಯಿರಿ.

೮೧. ೮ನೆಯ ಹೆನ್ರಿಯ ಆಳಿಕೆಯಲ್ಲಿ ನಡೆದ ಸಂಗತಿಗಳನ್ನು ಬರೆಯಿರಿ.

೮೨. ಲೂಥರನೇನು ಕಾರಣ ಪೋಪನ ಕೂಡ ಹಗೆತನ ಮಾಡಿದನು? ಈಹಗೆತನವು ಹೇಗೆ ಬೆಳೆಯಿತು? ಅದರ ಪರಿಣಾಮವೇನಾಯಿತು?

---

## ಪರಿಶಿಷ್ಟ (ಉ).

ಬ್ರಿಟಿಶ್ ರಾಜ್ಯವೆಲ್ಲ ಖಂಡಗಳಲ್ಲಿಯೂ ಎಲ್ಲ ಕಡಲುಗಳಲ್ಲಿಯೂ ಹಬ್ಬಿರುತ್ತದೆ. ಈ ರಾಜ್ಯದಲ್ಲಿ ಸೂರ್ಯನೆಂದೂ ಮುಳಗುವದಿಲ್ಲ; ಇದರ ಒಟ್ಟು ವಿಸ್ತಾರವು ೮೬,೯೪,೦೩೧ ಚಚ್ಚೌಕು ಮೈಲು; ಜನಸಂಖ್ಯೆಯು ೩೧,೬೦,೦೦,೦೦೦; ಅಥವಾ ಷಷ್ಠಾಂಶ ಪೃಥ್ವಿಯೂ ಪಂಚಮಾಂಶ ಮಾನವ ಪ್ರಾಣಿಗಳೂ ಬ್ರಿಟಿಶ್ ರಾಳಿಕೆಗೊಳಗಾಗಿರುತ್ತಾರೆ. ಇಡಿ ಪೃಥ್ವಿಯೊಳಗೆ ವಿಸ್ತಾರದಲ್ಲಿ ಈ ರಾಜ್ಯಕ್ಕೆ ಸರಿಯಾದ ರಾಜ್ಯವೊಂದೂ ಇಲ್ಲ. ರೂಸರಾಜ್ಯದ ವಿಸ್ತಾರವಾದರೂ ಇದಕ್ಕಿಂತ ಕಡಿಮೆಯಾಗಿರುತ್ತದೆ. ರೂಸರಾಜ್ಯದ ವಿಸ್ತಾರವು ೮೬,೪೪,೧೦೦ ಚಚ್ಚೌಕು ಮೈಲು. ಜನಸಂಖ್ಯೆಯಿಂದ ಈ ರಾಜ್ಯಕ್ಕೆ ಮಿಗಿಲಾದ ದೇಶವು ಇರುತ್ತದೆ. ಅದು ಚೀನದೇಶವು; ಅದರ ಜನಸಂಖ್ಯೆಯು ಸುಮಾರು ೪೦,೦೦,೦೦,೦೦೦ ಇರುತ್ತದೆ. ಈ ಬ್ರಿಟಿಶ್ ರಾಜ್ಯಕ್ಕೆ ಸೇರಿದ ಬೇರೆ ಬೇರೆ ಖಂಡಗಳಲ್ಲಿರುವ ಪ್ರದೇಶಗಳಾವವೆಂದರೆ:-

### ಯುರೋಪ ಖಂಡ.

೧. ಜಿಬ್ರಾಲ್ಟರ—ಇದು ಸ್ಪೇನದ ತೆಂಕಣಿಗೆ ಅದೇ ಹೆಸರಿನ ಸಾಮುದ್ರಧುನಿಯ ಮೇಲಿರುತ್ತದೆ; ಇದು ಭೂಮಧ್ಯಸಮುದ್ರದ ಹೆಬ್ಬಾಗಿಲಂತಿರುವುದರಿಂದ ಬ್ರಿಟಿಶ್ ನೌಕಾಧಿಪತ್ಯಕ್ಕವಶ್ಯವಾಗಿರುತ್ತದೆ; ಇದನ್ನು ಜಾರ್ಜರೂಕ ಧೊರೆಯು ೧೭೦೪ ರಲ್ಲಿ ಹಿಡಿದುಕೊಂಡನು; ಇದರ ಜನಸಂಖ್ಯೆಯು ಸುಮಾರು ೨೫೦೦೦.

೨. ಮಾಲ್ಟಾ—ಈ ನಡುಗಡ್ಡೆಯು ಸಿಸಿಲಿಯ ನೆರೆಯಲ್ಲಿರುತ್ತದೆ; ಇದನ್ನು ಇಂಗ್ಲಿಷರು ೧೮೦೦ ರಲ್ಲಿ ಹಿಡಿದುಕೊಂಡರು; ಅಂದಿನಿಂದ ಇದು ಬ್ರಿಟಿಶ್ ನೌಕೆಯ ಮುಖ್ಯಸ್ಥಾನವಾಗಿರುತ್ತದೆ; ಇದರ ಮುಖ್ಯ ಪಟ್ಟಣವು ವ್ಯಾಲೆಟ್ಟಾ; ಇದರ ವಿಸ್ತಾರವು ೧೧೫ ಚಚ್ಚೌಕು ಮೈಲು, ಜನಸಂಖ್ಯೆಯು ಸುಮಾರು ೧,೮೦,೦೦೦.

---

## ಏಸಿಯಾ ಖಂಡ.

೩. ಹಿಂದುಸ್ಥಾನ—ಇದರ ವಿಸ್ತಾರ ಜನಸಂಖ್ಯೆಗಳ ಬಗ್ಗೆ ಹಿಂದೆ ಪುಟ ೧, ೨. ನೋಡಿರಿ.

೪. ಸಿಂಹಲದ್ವೀಪ—ಇದು ೧೮೧೫ರಲ್ಲಿ ಇಂಗ್ಲಿಷರ ಕಯ್ಸೇರಿತು; ಇದರ ವಿಸ್ತಾರವು ೨೫,೩೬೪ ಜನಸಂಖ್ಯೆಯು ಸುಮಾರು೩೦,೦೦,೦೦೦; ಅಥವಾ ವಿಸ್ತಾರ ಜನಸಂಖ್ಯೆಗಳಲ್ಲಿದು ನಮ್ಮ ಕರ್ನಾಟಕದ ಚತುರ್ಥಾಂಶವಿರುತ್ತದೆ; ಇಲ್ಲಿ ಸಿಂಗಾಲಿ ಜನರಿರುತ್ತಾರೆ; ಅವರು ಬೌದ್ಧಮತದವರು; ಈನಡುಗಡ್ಡೆಯು ಹಿಂದುಸ್ಥಾನ ದಾವ ಇಲಾಖೆಗೂ ಸೇರಿರುವದಿಲ್ಲ; ಇದು ಮಹಾರಾಣಿಯವರ ಸ್ವಂತದಾಡಳಿತಕ್ಕೊಳಗಾಗಿರುತ್ತದೆ; ಇಲ್ಲಿ ಶ್ರೀಗಂಧ, ಸೀಸು, ತೇಗು, ಮತ್ತಿ, ಏಲಕ್ಕಿ, ಬುಂದು, ತೆಂಗು ಮುಂತಾದವುಗಳು ಬೆಳೆಯುತ್ತವೆ.

೫. ಸ್ಟ್ರೇಟ್ಸ್‌ಸೆಟ್ಲಮೆಂಟ್ಸ (ಮಲಕ್ಕಾ ಸಾಮುದ್ರಧುನಿಯ ಪ್ರದೇಶಗಳು). ಇವುಗಳೊಟ್ಟು ವಿಸ್ತಾರವು ೧,೪೪೫ ಚಚೌಕು ಮೈಲು; ಜನಸಂಖ್ಯೆಯು ಸುಮಾರು ೪,೬೬,೦೦೦. ಇವು ಸಿಂಹಲದ್ವೀಪದಂತೆ ಮಹಾರಾಣಿಯವರಧಿಕಾರಕ್ಕೊಳಗಾಗಿರುತ್ತವೆ; ಇವುಗಳೊಳಿದ್ದ ೪ ಭಾಗಗಳಾವವೆಂದರೆ:— (೧) ಪೆನಂಗ ಈ ನಡುಗಡ್ಡೆಗೆ ವೇಲ್ಸದರಸನ ನಡುಗಡ್ಡೆಯೆಂದೂ ಎನ್ನುತ್ತಾರೆ; ಇದು ಮಲಯಾ ದ್ವೀಪಕಲ್ಪದ ಪಡುವಣಿಗಿರುತ್ತದೆ; ಇದನ್ನು ಕೇಡಾದ ಅರಸನು ಪೂರ್ವಹಿಂದುಸ್ಥಾನ ಸಂಘಕ್ಕೆ ಮಾರಿದನು (೧೭೮೫). (೨) ವೆಲಸ್ಲೆಪ್ರಾಂತ—ಇದು ಮಲಯಾ ದ್ವೀಪಕಲ್ಪದಲ್ಲಿ ಪೆನಂಗದೆದುರಿಗಿರುತ್ತದೆ; ಇದನ್ನು ಸಂಘದವರು ೧೮೦೦ ರಲ್ಲಿ ದೊರಕಿಸಿದರು. (೩) ಮಲಕ್ಕಾ—ಈ ಪ್ರದೇಶವು ಮಲಯಾದ ಪಡುವಣ ದಂಡೆಯಲ್ಲಿರುತ್ತದೆ; ಇದರ ಮುಖ್ಯ ಪಟ್ಟಣ ಮಲಕ್ಕಾ. (೪) ಸಿಂಗಾಪೂರ—ಈ ನಡುಗಡ್ಡೆಯು ಮಲಯಾದ ತೆಂಕಣಿಗಿರುತ್ತದೆ; ಇದರಲ್ಲಿದ್ದ ಸಿಂಗಾಪೂರವು

ಮೇಲೆ ಹೇಳಿದ ನಾಲ್ಕು ಭಾಗಗಳ ರಾಜಧಾನಿಯೂ ವ್ಯಾಪಾರಕ್ಕೆ ಹೆಸರಾದ ಪಟ್ಟಣವೂ ಆಗಿರುತ್ತದೆ; ಇದನ್ನು ಸ್ಟಾಂಫೇರ್ಡ ರಾಫ್ಲೀಸ ಧೊರೆಯು ಜೊಹೋರದರಸಿನಿಂದ ಮಾರಲಿಕ್ಕೆ ತೆಗೆದುಕೊಂಡನು (೧೮೧೯).

೬. ಹಾಂಗಕಾಂಗ—ಈ ಚಿಕ್ಕ ನಡುಗಡ್ಡೆಯು ಚೀನ ದೇಶದ ಮೂಡಣಿಗೆ ಕಂತಾನ ಹೊಳೆಯ ಮುಖದ ಹತ್ತರವಿರುತ್ತದೆ; ಇದನ್ನು ಚೀನದ ಬಾದಶಹನು ೧೮೪೨ ರಲ್ಲಿ ಇಂಗ್ಲಿಷರಿಗೆ ಕೊಟ್ಟನು; ಇದರ ವಿಸ್ತಾರವು ೩೬ ಚಚ್ಚೌಕು ಮೈಲು; ಜನಸಂಖ್ಯೆಯು ೧,೬೦.೦೦೦; ಇದರ ಮುಖ್ಯ ಪಟ್ಟಣವು ವ್ಹಿಕ್ಟೋರಿಯಾ; ಇಲ್ಲಿ ಚಹಾ ಸಕ್ಕರೆ ಅಫು ಅರಳೆ ಮುಂತಾದ ಸರಕುಗಳ ವ್ಯಾಪಾರವು ಬಹಳವಾಗುತ್ತದೆ; ಇದರೆದುರಿಗಿದ್ದ ಕೌಲೂನ ದ್ವೀಪಕಲ್ಪವು ೧೮೬೧ ರಲ್ಲಿ ಇಂಗ್ಲಿಷರಿಗೆ ಸಿಕ್ಕಿತು.

೭. ಲೆಬುವನ್—ಇದು ಬೋರ್ನಿಯೋದ ವಾಯುವ್ಯಕ್ಕೊಂದು ಚಿಕ್ಕ ನಡುಗಡ್ಡೆಯುದೆ; ಇಲ್ಲಿ ಕಲ್ಲಿದ್ದಲಿಯು ಹೇರಳವಾಗಿ ದೊರೆಯುತ್ತದೆ; ಬೋರ್ನಿಯೋದ ಬಡಗಲಿದ್ದ ಸರವಕವೆಂಬ ಪ್ರಾಂತವು ಒಬ್ಬ ಬ್ರಿಟಿಶ್ಯ ಪ್ರಜೆಯ ಸಂಸ್ಥಾನವಿರುತ್ತದೆ; ಈ ಸಂಸ್ಥಾನವೂ ಇದರ ನೆರೆಯಲ್ಲಿದ್ದ ಬ್ರೂನಿಯೆಂಬ ಮತ್ತೊಂದು ದೇಶೀ ಅರಸನ ಸಂಸ್ಥಾನವೂ ಬ್ರಿಟಿಶ್ಯ ರಾಜ್ಯದಾಶ್ರಯದಲ್ಲಿರುತ್ತವೆ

೮. ಏಡನ್—ಅರಬಸ್ಥಾನದ ನೈರುತ್ಯಕ್ಕಿದ್ದ ಈ ಭದ್ರವಾದ ಸ್ಥಳವು ಮುಂಬಯಿ ಇಲಾಖೆಗೆ ಸೇರಿರುತ್ತದೆ.

೯. ಸೊಕೊಟ್ರಾ—ಇದು ಅರಬಿ ಸಮುದ್ರದಲ್ಲಿಯೊಂದು ದೊಡ್ಡ ನಡುಗಡ್ಡೆಯುದೆ; ಇದನ್ನು ಕೇಸಿಮುದ ಸುಲ್ತಾನನು ಇಂಗ್ಲಿಷರಿಗೆ ಕೊಟ್ಟನು (೧೮೭೬).

೧೦. ಸೈಪ್ರಸ್—ಈ ನಡುಗಡ್ಡೆಯು ಭೂಮಧ್ಯ ಸಮುದ್ರದ ಮೂಡಣ ಭಾಗದಲ್ಲಿ ಏಸಿಯಾ ಮೈನರದ ಪಡುವಣಿಗಿರುತ್ತದೆ. ಇದರ ವಿಸ್ತಾರವು ೩೭೦೦ ಚಚ್ಚೌಕು ಮೈಲು; ಜನಸಂ

ಖ್ಯೆಯು ಸುಮಾರು ೨,೦೧,೫೦೦; ಇಲ್ಲಿ ಬಹುಶಃ ಗ್ರೀಕ
ರೇ ಇರುತ್ತಾರೆ; ಇದರ ಮುಖ್ಯ ಪಟ್ಟಣವು ನಿಕೋಸಿಯಾ
೧೮೭೮ ರಲ್ಲಿ ತುರ್ಕಸ್ಥಾನದ ಸುಲ್ತಾನನು ಈ ನಡುಗಡ್ಡೆ
ಯನ್ನು ಇಂಗ್ಲಿಷರಿಗೆ ಕೊಟ್ಟನು; ಹತ್ತಿ ಸರಾಯಿ ಹಣ್ಣು
ಹಂಪಲಗಳು ಈ ನಡುಗಡ್ಡೆಯಲ್ಲಿ ಹುಟ್ಟುತ್ತವೆ.

---

## ಆಫ್ರಿಕಾ ಖಂಡ.

೧೧. ಕೇಪಕಾಲನಿ—ಈ ಪ್ರದೇಶವು ಆಫ್ರಿಕಾ ಖಂಡದ ತೀರ
ತೆಂಕಣಿಗೆ ಆರೇಂಜ ಹೊಳೆಯು ಕೆಳಗೆ ಕಡಲವರೆಗೆ ಹಬ್ಬಿ
ರುತ್ತದೆ; ಇಲ್ಲಿ ಮೊದಲು ಡಚ್ಚರು ಬಕ್ಕಲಾದರು (೧೬೫೨)
ಇದನ್ನು ಮುಂದೆ ಇಂಗ್ಲಿಷರು ೧೮೦೬ ರಲ್ಲಿ ಹಿಡಿದುಕೊಂ
ಡರು; ಇದಕ್ಕೆ ಬರಬರುತ್ತಾ ಕಾಫ್ರೇರಿಯಾ (೧೮೬೬) ಬ
ಸುಟೋಲಂಡ (೧೮೬೮), ಗ್ರಿಕ್ವಾಲಂಡ (೧೮೭೫-೬),
ಟ್ರಾನ್ಸ್ಕಿ ಮುಂತಾದ ಪ್ರಾಂತಗಳು ಸೇರಿದವು; ಈ ಪ್ರಾಂ
ತದ ವಿಸ್ತಾರವು ೨,೧೭,೦೦೦ ಚಚ್ಚೌಕು ಮೈಲು; ಜನ
ಸಂಖ್ಯೆ ೧೫,೦೧,೦೦೦; ಈ ಪ್ರದೇಶದ ಜನರು ಮುಖ್ಯ
ವಾದ ದನಕರುಗಳನ್ನು ಸಾಕುತ್ತಾರೆ; ಗ್ರಿಕ್ವಾಲಂಡದಲ್ಲಿ
ವಜ್ರದ ಖಣಿಗಳಿರುತ್ತವೆ; ಕಿಂಬರ್ಲೆಯೆಂಬಲ್ಲಿ ವರ್ಷಕ್ಕೆ
೪೦,೦೦,೦೦೦ ಪೌಂಡು ಬೆಲೆ ಬಾಳುವ ವಜ್ರಗಳು ದೊರೆ
ಯುತ್ತವೆ; ಕೇಪಕಾಲನಿಯು ಆಶ್ರಿತರಾಜ್ಯವಾಗಿರುತ್ತದೆ.

೧೨. ನೇಟಲ್—ಇದು ಆಫ್ರಿಕೆಯಾಗ್ನೇಯಕ್ಕಿರುತ್ತದೆ; ಇದರ
ವಿಸ್ತಾರವು ೨೧,೧೫೦ ಚಚ್ಚೌಕು ಮೈಲು; ಜನಸಂಖ್ಯೆ
೪,೮೦,೦೦೦; ಇಲ್ಲಿ ೧೮೩೭ ರಲ್ಲಿ ಡಚ್ಚರು ಬಕ್ಕಲಾದರು;
ಮುಂದೆ ೧೮೪೩ ರಲ್ಲಿ ಇಗ್ಲಿಷರು ಹಿಡಿದುಕೊಂಡರು;
೧೮೭೯ ರಿಂದ ಇದು ಆಶ್ರಿತ ರಾಜ್ಯವಾಗಿರುತ್ತದೆ; ಇದರ
ರಾಜಧಾನಿಯು ಪೀಟರಮಾರಿಟ್ಜಬರ್ಗವು; ಇಲ್ಲಿ ಹತ್ತಿ,
ಬುಂದು, ತಂಬಾಕು, ಸಕ್ಕರೆ, ಅರಾರೂಟ ಮುಂತಾದ ಸರ
ಕುಗಳು ಬೆಳೆಯುತ್ತದೆ; ಇಲ್ಲಿಂದ ಇಂಗ್ಲಂಡಕ್ಕೆ ಉಣ್ಣೆ
ತೊಗಲುಗಳು ರಫ್ತವಾಗುತ್ತವೆ.

೧೩. ಮಾರೀಶಸ್— ಈ ನಡುಗಡ್ಡೆಯು ಮಡಗಾಸ್ಕರದ ಪೂರ್ವ ಣಿಗಿರುತ್ತದೆ; ಇದರ ವಿಸ್ತಾರವು ೭೦೩ ಚಚ್ಚೌಕು ಮೈಲು, ಜನಸಂಖ್ಯೆಯು ೩,೬೧,೦೦೦; ಇದನ್ನು ಪೋರ್ತುಗೀಸರು ೧೫೦೫ ರಲ್ಲಿ ಗೊತ್ತು ಹಚ್ಚಿದರು; ೧೫೯೮ ರಲ್ಲಿ ಡಚ್ಚರು ಇದನ್ನು ಹಿಡಿದುಕೊಂಡು ತಮ್ಮರಸನಾದ ಮಾರೀಸನ ಸನ್ಮಾನಾರ್ಥವಾಗಿದಕ್ಕೆ ಮಾರೀಶಸ್ ಎಂಬ ಹೆಸರನ್ನಿಟ್ಟರು, ಮುಂದೆ ೧೪ ವರುಷಗಳ ತರುವಾಯಿದನ್ನು ಫ್ರೆಂಚರು ತೆಗೆದುಕೊಂಡರು; ಅವರಿಂದ ಇಂಗ್ಲಿಷರು ೧೮೧೦ರಲ್ಲಿ ಹಿಡಿದುಕೊಂಡರು; ೧೮೭೪ ರಲ್ಲಿ ದೊಡ್ಡ ಬಿರುಗಾಳಿಯು ೪ ದಿವಸಗಳ ವರೆಗೆ ಬೀಸಿ ಬಹಳ ಕೇಡುಮಾಡಿತು; ಈ ನಡುಗಡ್ಡೆಯಲ್ಲಿ ನಿವಾಸಿಗಳು ಹಿಂದೂ ಜನರಿರುತ್ತಾರೆ; ಇದರ ರಾಜಧಾನಿಯು ಪೋರ್ಟಲುಯಿ; ಈನಡುಗಡ್ಡೆಯಿಂದ ಸಕ್ಕರೆ ತೆಂಗಿನೆಣ್ಣೆ ಮುಂತಾದ ಪದಾರ್ಥಗಳು ರಫ್ತವಾಗುತ್ತವೆ.

೧೪. ಗ್ಯಾಂಬಿಯಾ— ಇದು ಪಡವಣಾಫ್ರಿಕೆಯಲ್ಲಿದೇ ಹೆಸರಿನ ಹೊಳೆಯ ಮುಖದ ಹತ್ತರೊಂದು ಸಣ್ಣಾಶ್ರಿತರಾಜ್ಯವಿರುತ್ತದೆ; ಇದರ ರಾಜಧಾನಿಯು ಬಾಥರ್ಸ್ಟ್; ಇಲ್ಲಿಯ ಹವೆಯು ಯುರೋಪಿಯರಿಗೆ ತಡೆಯುವದಿಲ್ಲ; ಇಲ್ಲಿಂದರಗು ಹೊಗಲು ಮುಂತಾದ ಪದಾರ್ಥಗಳು ರಫ್ತವಾಗುತ್ತವೆ.

೧೫. ಸೀರಾಲಿಯೋನ್— ಈ ಪ್ರದೇಶವು ಪಶ್ಚಿಮಾಫ್ರಿಕೆಯ ದಂಡೆಯಲ್ಲಿರುತ್ತದೆ; ಇದರ ರಾಜಧಾನಿಯು ಫ್ರಿಟೌನವು; ಇದರ ವಿಸ್ತಾರವು ೪೭೯ ಚ. ಮೈ. ಜನಸಂಖ್ಯೆಯು ಸುಮಾರು ೩೮೦೬೦.

೧೬. ಗೋಲ್ಡ ಕೋಸ್ಟಕಾಲನಿ-(ಚಿನ್ನದ ದಂಡೆಯಾಶ್ರಿತರಾಜ್ಯ) ಈ ಪ್ರದೇಶವು ಗಿನಿಯಾಖಾತದ ಸರೆಯಲ್ಲಿರುತ್ತದೆ; ಇದರ ವಿಸ್ತಾರವು ೧೬೬೦೦ ಚ. ಮೈ. ಜನಸಂಖ್ಯೆಯು ಸುಮಾರು ೫,೫೫,೦೦೦; ಇಲ್ಲಿ ಚಿನ್ನ ಜಂತ ಮುಂತಾದ ಪದಾರ್ಥ

ಗಳು ದೊರೆಯುತ್ತವೆ; ಇದರಲ್ಲಿ ಎಲ್ಮಿನಾ, ಅಕ್ರಾ ಅಕ್ಸಿಮ್
ಎಂಬ ಮೂರು ಬಿಕ್ಕಲಾದ ಪ್ರದೇಶಗಳಿರುತ್ತವೆ; ಇದರ ರಾ
ಜಧಾನಿಯು ಕೇಪಕ್ಯಾಸಲ್ಟ್ಯಾನವು.

೧೭. ಲಾಗೋಸ್—ಈ ಚಿಕ್ಕ ನಡುಗಡ್ಡೆಯು ಗಿನಿಯಾಖಾತದಲ್ಲಿರು
ತ್ತದೆ; ಇಲ್ಲಿಂದ ತಾಡವೃಕ್ಷದ ಫಲಗಳೂ ಎಣ್ಣೆಯೂ ರಫ್ತಾ
ವಾಗುತ್ತವೆ.

೧೮. ಸೆಂಟಹೆಲೆನಾ—ಈ ನಡುಗಡ್ಡೆಯು ಪಡುವಣಾಫ್ರಿಕೆಯ ದಂ
ಡೆಯಿಂದ ೧೨೦೦ ಮೈಲಿನ ಮೇಲಿರುತ್ತದೆ; ಇದನ್ನು ಮೊ
ದಲು ಪೋರ್ತುಗೀಸರು ಗೊತ್ತುಹಚ್ಚಿದರು; ಅವರಿಂದಿಂಗ್ಲಿ
ಷರು ೧೬೫೧ರಲ್ಲಿ ಹಿಡಿದುಕೊಂಡರು. (ಹಿಂದೆ ಪುಟ ನೋ
ಡು.) ಇದರ ವಿಸ್ತಾರವು ೪೭ ಚಚ್ಚೌಕು ಮೈಲು, ಜನಸಂ
ಖ್ಯೆಯು ಸುಮಾರು ೫,೧೦೦; ಇದರ ರಾಜಧಾನಿಯು ಜೇಮ್ಸ
ಟೌನವು; ಇಲ್ಲಿ ಹಣ್ಣು ಹಂಪಲಗಳು ಹುಟ್ಟುತ್ತವೆ; ಈ ದೇ
ಶಕ್ಕೆ ಬರುವ ಉಗಿಹಡಗುಗಳಿದರ ಮೇಲಿಂದ ಬರುತ್ತವೆ.

೧೯. ಅಸೆನ್ಸನ್—ಈ ನಡುಗಡ್ಡೆಯು ಸೆಂಟ ಹೆಲೆನೆಯಿಂದ ೮೫೦
ಮೈಲು ದೂರವಾಗಿರುತ್ತತೆ; ಇದನ್ನು ಮೊದಲು ಪೋರ್ತು
ಗೀಸರು ಗೊತ್ತುಹಚ್ಚಿದರು. (೧೫೦೧); ಅವರಿಂದಿಂಗ್ಲಿಷರು
೧೮೧೫ರಲ್ಲಿ ಹಿಡಿದುಕೊಂಡರು; ಇದರ ವಿಸ್ತಾರವು ೩೪ ಚ.
ಮೈ. ಜನಸಂಖ್ಯೆಯು ಸುಮಾರು ೫೦೦. ಈ ಜನರೆಲ್ಲರು
ಜಾರ್ಜಟಾನವೆಂಬಲ್ಲೇ ಇರುತ್ತಾರೆ.

---

## ಅಮೇರಿಕಾ ಖಂಡವು,

೨೦. ಕಾನಡಾ ರಾಜ್ಯವು—ಇದನ್ನು ಸಿಬಾಸ್ಟಿಯನ್ ಕ್ಯಾಬಟ್
ಎಂಬವನು ೧೪೯೭ ರಲ್ಲಿ ಗೊತ್ತುಹಚ್ಚಿದನಂತೆ; ಮುಂದೆ
೧೫೦೪ರಲ್ಲಿ ಫ್ರೆಂಚರು ಇದನ್ನು ಹಿಡಿದುಕೊಂಡರು; ಫ್ರೆಂ
ಚರು ಬಳಿಕ ಕ್ವಿಬೆಕ್ ಪಟ್ಟಣವನ್ನು ಕಟ್ಟಿಸಿದರು(೧೬೦೮);

ಏಳುವರ್ಷದ ಯುದ್ಧವು ನಡೆದಾಗ ಇಂಗ್ಲಿಷ ದಳವಾಯಿಯಾದ ಉಲ್ಫನು ಕ್ವೀಬೆಕ್ಕವನ್ನು ತೆಗೆದುಕೊಂಡನು (೧೭೫೯) ಬಳಿಕ ೧೭೬೩ರಲ್ಲಿಯಾದ ಪಾರೀಸದೊಪ್ಪಂದದಿಂದ ಕಾನಡಾ ರಾಜ್ಯವನ್ನು ಫ್ರೆಂಚರು ಇಂಗ್ಲಿಷರಿಗೊಪ್ಪಿಸಿದರು; ಈ ರಾಜ್ಯವು ಕರ್ನಾಟಕದ ೩೪ ಮಡಿಯಷ್ಟು ದೊಡ್ಡದಿರುತ್ತದೆ, (೩೪,೬೦,೦೦೦; ಚ. ಮೈ.); ಜನಸಂಖ್ಯೆಯು ಸುಮಾರು ಕರ್ನಾಟಕದರ್ಧದಷ್ಟು (೪೩,೨೪,೮೧೦); ಇದರಲ್ಲಿ ೮ ಭಾಗಗಳಿರುತ್ತವೆ:--ಒಂಟಾರಿಯೊ(ಬಡಗಣ ಕಾನಡಾ), ಕ್ವಿಬೆಕ್', ನ್ಯೂಬ್ರನ್ಸವಿಕ್ಕ, ನೋವಾಸ್ಕೋಶಿಯಾ, ಮಾನಿಟೋಬಾ, ಪ್ರಿನ್ಸಎಡ್ವರ್ಡನಡುಗಡ್ಡೆ, ಬ್ರಿಟಿಶ ಕೋಲಂಬಿಯಾ, ನಾಯವ್ಯಪ್ರಾಂತ; ಪ್ರತಿಯೊಂದುಭಾಗದಲ್ಲಿಯೊಬ್ಬ ಪಾಧಿಪತಿಯೂ (ಲೆಫ್ಟನಂಟ ಗವರ್ನರನೂ) ಒಂದು ಆಲೋಚನಾ ಸಭೆಯೂ ಇರುತ್ತವೆ; ಒಂಟಾರಿಯೋ ಭಾಗದಲ್ಲಿದ್ದ ಅಟ್ಟವಾಯೆಂಬ ಪಟ್ಟಣವೇ ಇಡಿ ರಾಜ್ಯದ ರಾಜಧಾನಿಯು ಇಲ್ಲಿ ಮಹಾರಾಣಿಯವರು ನಿಯಮಿಸಿದ ಸರ್ವಾಧಿಪತಿಯಿರುತ್ತಾನೆ, ಇವನೂ ಆಲೋಚನಾಸಭೆಯವರಾರಿಸಿದ ಸಭಾಸದರುಳ್ಳ ಒಂದು ಪ್ರಜಾ ಸಭೆಯೂ ಕೂಡಿ ಕಾನಡಾರಾಜ್ಯದ ರಾಜ್ಯಭಾರವನ್ನು ನಡಿಸುತ್ತಾರೆ; ಈ ರಾಜ್ಯದ ಭೂಮಿಯು ಬೆಳೆಯುಳ್ಳದ್ದು; ಇಲ್ಲಿ ಯೆಲ್ಲತರದ ಧಾನ್ಯಗಳು ಹತ್ತಿ ಉಣ್ಣೆ ಸಕ್ಕರೆ ತೇಗು ಮುಂತಾದವುಗಳು ಹುಟ್ಟುತ್ತವೆ; ಕ್ವಿಬೆಕ್ಕಕ್ಕೆ ಅಮೇರಿಕಾಖಂಡದ ಜಿಬ್ರಾಲ್ಟರವೆನ್ನುತ್ತಾರೆ.

೨೧. ನ್ಯೂಫೌಂಡಲಂಡ— ಈ ನಡುಗಡ್ಡೆಯು ಸೆಂಟಲಾರೆನ್ಸ ಖಾತಕ್ಕೆದುರಾಗಿರುತ್ತದೆ; ಇದರ ವಿಸ್ತಾರವು ೪೦,೨೦೦ ಚ. ಮೈ. ಜನಸಂಖ್ಯೆಯು ಸುಮಾರು ೨ ಲಕ್ಷ; ಈ ನಡುಗಡ್ಡೆಯನ್ನು ಮೊದಲು ನಾರ್ವೆಯವರು ಗೊತ್ತು ಹಚ್ಚಿದರು (೧೦೦೦); ಇಲ್ಲಿ ೧೬೨೩ರಿಂದ ಇಂಗ್ಲಿಷರು ಒಕ್ಕಲಾಗ ಹತ್ತಿದರು; ಇಂಗ್ಲಂಡದ ೩ನೆಯ ಜಾರ್ಜನಾಳಿಕೆಯಲ್ಲೀ ನಡುಗಡ್ಡೆ

ಯು ೧ನೆಯಧಿಪತಿಯು ನಿಯಮಿಸಲ್ಪಟ್ಟನು (೧೩೨೮) ಇದರ ನೆರೆಯಲ್ಲಿದ್ದ ಅಟ್ಟಿಕೋಸ್ಟಿ ಎಂಬ ಚಿಕ್ಕ ನಡುಗಡ್ಡೆಯು ಈ ಯಧಿಪತಿಯಧಿಕಾರಕ್ಕೊಳಗಾಗಿರುತ್ತದೆ.

೨೨. ಬ್ರಿಟಿಶ್ ವೆಸ್ಟ್ ಇಂಡಿಯಾ ದ್ವೀಪಗಳು—ಇವುಗಳಲ್ಲಿ ಮುಖ್ಯವಾದವುಗಳಾವವೆಂದರೆ:—ಜಮೇಕಾ, ಟ್ರಿನಿದಾದ, ಟೊಬಾಗೊ, ಬಾರ್ಬಡಾಸ, ಗ್ರೆನಡಾ ಸೆಂಟವ್ಹಿನ್ಸೆಂಟ, ಸೆಂಟಲೂಯಾ, ಡೊಮಿನಿಕಾ, ಅಂಟಿಗ್ವಾ, ಬರ್ಬುಡಾ, ಮಾಂಟ್ಸೆರಟ್, ನೇವ್ಹಿಸ್, ಸೆಂಟಕ್ರಿಸ್ಟೋಫರ, ಮೂರು ಕುಮಾರೀ ದ್ವೀಪಗಳು, ಬಾಹಮಾನಡುಗಡ್ಡೆಗಳು, ಬರ್ಮುಡಾ ನಡುಗಡ್ಡೆಗಳು. (೧) ಬಾಹಮಾ ನಡುಗಡ್ಡೆಗಳು—ಒಟ್ಟು ಇವು ೨೦ ಗಡ್ಡೆಗಳಿರುತ್ತವೆ; ಇವುಗಳ ವಿಸ್ತಾರವು ೫೩೯೪ ಚ. ಮೈ. ಜನಸಂಖ್ಯೆಯು ಸುಮಾರು ೪೩೫೦೦; ಇವುಗಳಲ್ಲಿಯೊಂದಾದ ವಾಟ್ಲಿಂಗ ನಡುಗಡ್ಡೆಯನ್ನು ಕೋಲಂಬಸನು ಮೊದಲು ಕಂಡನು (೧೪೯೨); ಇವುಗಳಿಂದ ಸ್ಪಂಜಗಳೂ ಹಣ್ಣುಗಳೂ ರಫ್ತವಾಗುತ್ತವೆ; ಇವುಗಳ ಮುಖ್ಯ ಗ್ರಾಮವು ನಾಸಾ. (೨) ಬರ್ಮುಡಾ ನಡುಗಡ್ಡೆಗಳು—ಒಟ್ಟು ಇವು ೩೫೦ ಗಡ್ಡೆಗಳಿರುತ್ತವೆ; ಇವುಗಳವಿಸ್ತಾರವು ೪೧ ಚ. ಮೈ. ಜನಸಂಖ್ಯೆಯು ಸುಮಾರು ೧೪೦೦೦; ಇವುಗಳಲ್ಲಿ ಉತ್ತಮವಾದ ಅರಾರೂಟವು ಹುಟ್ಟುತ್ತದೆ; ಇವುಗಳ ಮುಖ್ಯ ಪಟ್ಟಣವು ಹ್ಯಾಮಿಲ್ಟನ್ನ. (೩) ಜಮೇಕಾ—ಈನಡುಗಡ್ಡೆಗಳಲ್ಲಿದು ದೊಡ್ಡದು; ಇದನ್ನು ಕೋಲಂಬಸನು ಗೊತ್ತುಹಚ್ಚಿದನು; ಇದರಲ್ಲಿ ಸ್ಪೇನರು ಮೊದಲು ಒಕ್ಕಲಾದರು (೧೫೦೯); ಮುಂದೆ ೧೬೫೫ರಲ್ಲಿ ಇಂಗ್ಲಿಷರು ಇದನ್ನು ಹಿಡಿದುಕೊಂಡರು; ಇದರ ವಿಸ್ತಾರವು ೪೨೫೬ ಚ. ಮೈ. ಜನಸಂಖ್ಯೆಯು ೩,೦೦,೩೪೩; ಇಲ್ಲಿ ಬೆಲ್ಲ ಸಕ್ಕರೆ ಮುಂದು ಮುಂತಾದ ಸಾಮಾನುಗಳು ಹುಟ್ಟುತ್ತವೆ; ಇದರ ಮುಖ್ಯ ಪಟ್ಟಣವು ಕಿಂಗ್ಸಟೌನವು.

೨೩. ಬ್ರಿಟಿಶ್ ಹೊಂಡುರಾಸ—ಇದು ಮಧ್ಯಮೇರಿಕದ ಮೂಡಣ ದಂಡೆಯಲ್ಲಿರುತ್ತದೆ; ಇದರ ವಿಸ್ತಾರವು ೩,೫೬೨ ಚಚ್ಚೌಕು ಮೈಲು; ಜನಸಂಖ್ಯೆಯು ೨೩,೪೫೦; ಇಲ್ಲಿಯ ನಿವಾಸಿಗಳು ಬಹುಶಃ ನಿಗ್ರೋಜನರು; ಇಲ್ಲಿ ಮಾಗನಿಮರ ಬುಂದು, ಕೋಕೊ, ರಬ್ಬರ ಮುಂತಾದವುಗಳು ಹುಟ್ಟುತ್ತವೆ.

೨೪. ಬ್ರಿಟಿಶ್ ಗ್ವಾಯನಾ—ಇದು ತೆಂಕಣಮೇರಿಕದ ಈಶಾನ್ಯಕ್ಕಿರುತ್ತದೆ; ಇದರ ವಿಸ್ತಾರವು ೭೬,೦೦೦ ಚಚ್ಚೌಕು ಮೈಲು; ಜನಸಂಖ್ಯೆಯು ೨,೫೦,೦೦೦; ಇದನ್ನು ಕೋಲಂಬಸನು ಮೊದಲು ಗೊತ್ತು ಹಚ್ಚಿದನು (೧೪೯೮); ಇಲ್ಲಿ ಡಚ್ಚರು ೧೫೮೦ ರಲ್ಲಿ ಒಕ್ಕಲಾದರು; ಬಳಿಕವರು ೧೮೧೪ ರಲ್ಲಿದನ್ನು ಇಂಗ್ಲಿಷರಿಗೆ ಕೊಟ್ಟರು; ಇಲ್ಲಿ ಸಕ್ಕರೆ ತಂಬಾಕು ಹತ್ತಿ ಬುಂದು ತೇಗು ಮುಂತಾದವುಗಳು ಹುಟ್ಟುತ್ತವೆ; ಇದರ ಮುಖ್ಯ ಪಟ್ಟಣವು ಜಾರ್ಜಟೌನವು.

೨೫. ಫಾಕಲಂಡ ನಡುಗಡ್ಡೆಗಳು— ಈಯೆರಡು ನಡುಗಡ್ಡೆಗಳು ಮಾಗಾಲೆನ್ ಸಾಮುದ್ರಧುನಿಯು ಮೂಡಣಿಗೆ ೩೦೦ ಮೈಲಿನ ಮೇಲೆ ಅಟ್ಲಾಂಟಿಕ್ ಮಹಾಸಾಗರದಲ್ಲಿರುತ್ತವೆ; ಇವುಗಳ ವಿಸ್ತಾರವು ೭೬೦೦ ಚ. ಮೈ. ಜನಸಂಖ್ಯೆಯು ೧೫೫೩ ಮಾತ್ರ; ಇವುಗಳಲ್ಲಿ ಕಾಡೆತ್ತುಗುದುರೆಗಳು ಮಾತ್ರ ದೊರೆಯುತ್ತವೆ.

## ಆಸ್ಟ್ರೇಲಿಯಾ.

೨೬. ಆಸ್ಟ್ರೇಲಿಯಾ (ತೆಂಕಣ ಭೂಮಿ)—ಈಮಹಾದ್ವೀಪವು ತೆಂಕಣ ಗೋಲಾರ್ಧದಲ್ಲಿರುತ್ತದೆ; ಇದರೊಟ್ಟು ವಿಸ್ತಾರವು ೩೦,೩೦,೦೦೦ ಚ. ಮೈ., ಜನಸಂಖ್ಯೆಯು ೩೫,೦೦,೦೦೦ ಮಾತ್ರ; ೧೭೮೮ ರಿಂದ ಇಂಗ್ಲಿಷರು ಇಲ್ಲಿಯೊಕ್ಕಲಾಗ ಹತ್ತಿದರು; ಇಲ್ಲಿಯ ಚಿನ್ನದ ಕಣಿಗಳು ಗೊತ್ತು ಹತ್ತಿದಂದಿನಿಂದ (೧೮೫೧ ರಿಂದ) ಈದ್ವೀಪದ ಜನಸಂಖ್ಯೆಯು ವರ್ಷವರ್ಷಕ್ಕೆ ಹೆಚ್ಚುತ್ತಾ

ನಡೆವದೆ; ಹೊಟ್ಟೆಗಿಲ್ಲದುದರಿಂದ ಮೂಲ ನಿವಾಸಿಗಳ ಸಂಖ್ಯೆಯು ದಿನದಿನಕ್ಕೆ ಕಡಿಮೆಯಾಗುತ್ತಾ ನಡೆವದೆ; ಈ ಮಹಾದ್ವೀಪದಾಶ್ರಿತರಾಜ್ಯಗಳು ೬ ಇರುತ್ತವೆ; ಅವುಗಳಾವವೆಂದರೆ:—(೧) ನ್ಯೂಸೌಥವೇಲ್ಸ—ಇದು ಆಸ್ಟ್ರೇಲಿಯಾದ ಮೂಡಲಿರುತ್ತದೆ; ಇಲ್ಲಿ ಮೊದಲು ೧೭೮೮ ರಲ್ಲಿ ಗ್ರೇಟಬ್ರಿಟನ್ನ ಯುರ್ಲಂಡ ದೇಶಗಳ ತಪ್ಪುಗಾರರನ್ನಿಡ ಹತ್ತಿದರು; ಇದರ ವಿಸ್ತಾರವು ೩,೧೦,೦೦೦ ಚ. ಮೈ. ಜನಸಂಖ್ಯೆಯು ೧೧,೯೦,೦೦೦; ಇಲ್ಲಿಯ ಜನರು ಕುರಿದನಗಳನ್ನು ಹೆಚ್ಚಾಗಿ ಸಾಕುತ್ತಾರೆ; ಸುಮಾರು ೩,೩೦,೦೦,೦೦೦ ಎಕರೆ ಭೂಮಿಯು ಬೀಳು ಬಿದ್ದಿರುತ್ತದೆ; ಇಲ್ಲಿ ಉಣ್ಣೆ, ಜೋಳ, ಗೋದಿ, ತವಕೀರು, ಸಕ್ಕರೆ, ತಂಬಾಕು, ಸರಾಯಿ ಮುಂತಾದವುಗಳು ಹುಟ್ಟುತ್ತವೆ; ಚಿನ್ನ ಬೆಳ್ಳಿ ಸೀಸ ತಾಮ್ರ ತವರ ಕಬ್ಬಿಣ ಕಲ್ಲಿದ್ದಲಿ ಮುಂತಾದ ಖನಿಜಗಳಾದರೂ ದೊರೆಯುತ್ತವೆ; ಇಲ್ಲಿಯಧಿಪತಿಯನ್ನು ಮಹಾರಾಣಿಯವರು ನಿಯಮಿಸುತ್ತಾರೆ; ಆವನು ಪ್ರಜಾಸಭೆ, ಸರದಾರರ-ಸಭೆಯೆಂಬೆರಡು ಸಭೆಗಳನುಮತಿಯಂತೆ ರಾಜ್ಯಕಾರ್ಯವನ್ನು ನಡಿಸುತ್ತಾನೆ; ಇದರ ರಾಜಧಾನಿಯು ಸಿಡ್ನಿ; ನ್ಯೂಕ್ಯಾಸಲ್ ಬಾಥರ್ಸ್ಟವೆಂಬೆರಡು ದೊಡ್ಡ ಪಟ್ಟಣಗಳು; ನಾಫೋರ್ಕ ನಡುಗಡ್ಡೆಯು ಈ ರಾಜ್ಯಕ್ಕೆಸೇರಿರುತ್ತದೆ. (೨) ಕ್ವೀನ್ಸಲಂಡ—ಇದು ಆಸ್ಟ್ರೇಲಿಯಾದ ಈಶಾನ್ಯಕ್ಕಿರುತ್ತದೆ; ಇದರ ವಿಸ್ತಾರವು ೬,೬೮,೪೯೭ ಚ. ಮೈ. ಜನಸಂಖ್ಯೆಯು ೩,೯೦,೦೦೦; ಇದರ ಹುಟ್ಟುವಳಿಗಳು ನ್ಯೂಸೌಥವೇಲ್ಸದಂತೆಯೇ; ಇದರ ರಾಜಧಾನಿಯು ಬ್ರಿಸ್ಬೇನವು; ರಾಕ್‌ಹ್ಯಾಂಪ್ಟನ್ ಮೇರಿಬರೊ ಇಪ್ಸವಿಚ್ಚ ಎಂಬವು ಪಟ್ಟಣಗಳು. (೩) ವ್ಹಿಕ್ಟೋರಿಯಾ—ಇದಕ್ಕೂ ನ್ಯೂಸೌಥವೇಲ್ಸಕ್ಕೂ ನಡುವೆ ಮರೆ ಹೊಳೆಯು ಹರಿಯುತ್ತದೆ; ಇದರ ವಿಸ್ತಾರವು ೮೭,೮೮೪ ಚ. ಮೈ. ಜನಸಂಖ್ಯೆಯು ೧೧,೦೫,೦೦೦; ಇದರ ಹುಟ್ಟುವಳಿಗಳು ನ್ಯೂಸೌ

ಫ್‌ವೇಲ್ಸದಂತೆಯೇ; ಇಲ್ಲಿಂದುಣ್ಣೆ ಚಿನ್ನಗಳು ರಫ್ತಾಗುತ್ತವೆ; ಇದರ ರಾಜಧಾನಿಯು ಮೆಲ್ಬೂರ್ನ; ಬಾಲಾರೆಟ್ಟವು ಚಿನ್ನದ ಮುಖ್ಯಸ್ಥಳವು; ಇವುಗಳ ಹೊರತು ಸ್ಯಾಂಡಹರ್ಸ್ಟ ಜೀಲಾಂಗ ಮುಂತಾದ ಪಟ್ಟಣಗಳುಂಟು; ವಿಕ್ಟೋರಿಯಾವು ೧೮೫೧ರಲ್ಲಿ ಬೇರೆಯಾಶ್ರಿತ ರಾಜ್ಯವಾಯಿತು; ಇಲ್ಲಿ ಚಿನ್ನವು ಬಹಳವಾಗಿ ಹುಟ್ಟುತ್ತಿರುವುದರಿಂದಿದು ದಿನದಿನಕ್ಕೆ ಬೆಳೆಯುತ್ತಾ ನಡೆದದೆ. (೪) ತೆಂಕಣಾಸ್ಟ್ರೇಲಿಯಾ— ಇದು ಆಸ್ಟ್ರೇಲಿಯಾದ ಮಧ್ಯದಲ್ಲಿರುತ್ತದೆ; ಇದರ ವಿಸ್ತಾರವು ೯,೦೩,೬೯೦ ಚ. ಮೈ. ಜನಸಂಖ್ಯೆಯು ೩,೨೦,೦೦೦; ಇಲ್ಲಿ ಚಿನ್ನ ಬೆಳ್ಳಿ ಕಬ್ಬಿಣ ಮುಂತಾದ ಖನಿಜಗಳು ದೊರೆಯುತ್ತವೆ; ಇದರ ರಾಜಧಾನಿಯು ಅಡಿಲೇಡವು; ಬುರ್ರಬುರ್ರ (ಕೋರಿಂಗ) ಎಂಬಲ್ಲಿ ಖನಿಜದ ಕೆಲಸವು ಬಹಳವಾಗಿ ನಡೆಯುತ್ತದೆ. (೫) ಪಡವಣಾಸ್ಟ್ರೇಲಿಯಾ— ಇದರ ವಿಸ್ತಾರವು ೯,೭೫,೯೨೦ ಚ. ಮೈ. ಜನಸಂಖ್ಯೆಯು ೪೪೦೦೦; ಇದು ಆಸ್ಟ್ರೇಲಿಯಾದ ರಾಜ್ಯಗಳಲ್ಲಿ ಅಪ್ರಸಿದ್ಧವಾದುದು; ಇದರ ರಾಜಧಾನಿಯು ಪರ್ಥವು; ಅಲ್ಬನಿ-ಫ್ರೀಮ್ಯಾಂಟಲುಗಳೆಂಬೆರಡು ಪಟ್ಟಣಗಳುಂಟು. (೬) ತಾಸ್ಮೇನಿಯಾ—(ವ್ಯಾನ್ ಡೀಮನ್ಸಲ್ಯಾಂಡ) ಈ ನಡುಗಡ್ಡೆಯಾಸ್ಟ್ರೇಲಿಯಾದ ತೆಂಕಣೆಗಿರುತ್ತದೆ; ಇದರ ವಿಸ್ತಾರವು ೨೬,೨೧೬ ಚ. ಮೈ. ಜನಸಂಖ್ಯೆಯು ೧,೪೬,೦೦೦; ಇದರ ಹವೆಯಾಸ್ಟ್ರೇಲಿಯಾಗಿಂತ ತಂಪಾದುದು; ಇಲ್ಲಿಂದ ಹಣ್ಣುಹಂಪಲಗಳೂ ಧಾನ್ಯಗಳೂ ರಫ್ತಾಗುತ್ತವೆ; ಇದರ ರಾಜಧಾನಿಯು ಹೋಬರ್ಟವು; ಲಾನ್ಸೆಸ್ಟನ್—ಜಾರ್ಜಟೌನಗಳೆಂಬೆರಡು ಪಟ್ಟಣಗಳುಂಟು.

೨೩. ನ್ಯೂಝೀಲಂಡ—ಈ ಮೂರು ನಡುಗಡ್ಡೆಗಳ ಗುಂಪು ಆಸ್ಟ್ರೇಲಿಯಾದ ಅಗ್ನೇಯಕ್ಕೆ ೧೨೦೦ ಮೈಲಿನ ಮೇಲಿರುತ್ತದೆ; ಇದನ್ನು ತಾಸ್ಮೇನಿಯೆಂಬವನು ಗೊತ್ತುಹಚ್ಚಿದನು (೧೬೪೨);

ಇವಕ್ಕೆ ಮೊದಲು ಸ್ಟೇಟನ್‌ಲ್ಯಾಂಡವೆಂಬ ಹೆಸರಿತ್ತು; ವಾಲ್ಟಿಂಗಿಯಲ್ಲಿಯಾದೊಪ್ಪಂದದಿಂದ ದೇಶೀಯರಸರು ಈ ನಡುಗಡ್ಡೆಯನ್ನಿಂಗ್ಲಿಷರಿಗೊಪ್ಪಿಸಿದರು (೧೮೪೦); ಇವರ ವಿಸ್ತಾರವು ಸುಮಾರು ಕರ್ನಾಟಕದಷ್ಟು (೧,೦೪,೦೦೦ ಚ. ಮೈ.); ಜನಸಂಖ್ಯೆಯು ೬,೦೩೦೦೦; ಇದರ ಹವೆಯು ಸಾಧಾರಣವಾಗಿ ಇಂಗ್ಲಂಡದಂತೇ ಇರುತ್ತದೆ; ಇಲ್ಲಿ ಧಾನ್ಯಗಳೂ ಹಣ್ಣು ಹಂಪಲಗಳೂ ಸಾಕಷ್ಟು ಬೆಳೆಯುವದಿಲ್ಲ; ಜನರು ಗೆಣಸಿನ ಮೇಲೆ ಇರುತ್ತಾರೆ; ಇಲ್ಲಿ ದನಕರುಗಳಾದರೂ ಕಡಿಮೆ; ಇಲ್ಲಿಯ ಜನರು ಆಸ್ಟ್ರೇಲಿಯಾದ ಮೂಲ ನಿವಾಸಿಗಳಂತೆ ಕಾಡು ಜನರಲ್ಲ; ಇವರು ದ್ರವಿಡಕುಲದವರೆಂದು ತೋರುತ್ತದೆ; ಇಲ್ಲಿ ಚಿನ್ನದ ಕಣಿಗಳು ಬಹಳ; ಇಲ್ಲಿಂದುಣ್ಣೆ ಚಿನ್ನಂಟು ಮುಂತಾದವುಗಳು ರಫ್ತಾಗುತ್ತವೆ; ಇದು ಆಶ್ರಿತರಾಜ್ಯವಿರುವದರಿಂದ, ಇಲ್ಲಿಯಧಿಪತಿಯು ಇಂಗ್ಲಂಡದಿಂದ ಬರುತ್ತಾನೆ; ಇದರ ರಾಜಧಾನಿಯು ವೆಲಿಂಗ್ಟನ್ನವು; ತೆಂಕಣನಡುಗಡ್ಡೆಯಲ್ಲಿದ್ದ ಒಟಾಗೊ ಎಂಬಲ್ಲಿ ಚಿನ್ನವು ಹೇರಳವಾಗಿ ದೊರೆಯುತ್ತದೆ.

೨೮. ಫೀಜಿ ನಡುಗಡ್ಡೆಗಳು—ಇವು ನ್ಯೂಝೀಲಂಡದ ಬಡಗಣಿಗೆ ೧೧೦೦ ಮೈಲಿನ ಮೇಲೆ ಪಾಸಿಫಿಕ್ ಮಹಾಸಾಗರದಲ್ಲಿ ೨೨೫ ನಡುಗಡ್ಡೆಗಳಿರುತ್ತವೆ; ಇವುಗಳನ್ನು ದೇಶೀಯರಸರು ಇಂಗ್ಲಿಷರಿಗೊಪ್ಪಿಸಿದರು (೧೮೭೪); ಇವುಗಳ ವಿಸ್ತಾರವು ೮೦೦೦ ಚ. ಮೈ. ಜನಸಂಖ್ಯೆಯು ೧,೧೦,೦೦೦; ಇವುಗಳಲ್ಲಿ ಜೋಳ ಸಕ್ಕರೆ ಬುಂದು ತವಕೀರು ಹತ್ತಿ ತೆಂಗು ಮುಂತಾದವುಗಳು ಹುಟ್ಟುತ್ತವೆ; ಇವುಗಳ ಮುಖ್ಯ ಪಟ್ಟಣವು ಸುವಾ.



ಕರ್ನಾಟಕ

# ವಿದ್ಯಾವರ್ಧಕ ಸಂಘ,

ಕನ್ನಡ ಮಾತಾಡುವ ಜನರಲ್ಲಿ ವಿದ್ಯೆಯನ್ನು ಕೆಳಗೆ ಬರೆದ ಬಗೆಗಳಿಂದ ಹೆಚ್ಚಿಸಬೇಕೆಂಬದು ಈ ಸಂಘದ ಉದ್ದೇಶವಿರುತ್ತದೆ:-

(೧) ಹಣದ ಅನುಕೂಲತೆಯಂತೆ ಕನ್ನಡ ಪುಸ್ತಕಾಲಯಗಳನ್ನು ಸ್ಥಾಪಿಸುವದು ಇಲ್ಲವೆ ಈಗಿದ್ದವುಗಳಿಗೆ ಸಹಾಯ ಮಾಡುವದು; (೨) ಬೇರೆ ಭಾಷೆಗಳಲ್ಲಿದ್ದ ಉಪಯೋಗವುಳ್ಳ ಪುಸ್ತಕಗಳನ್ನು ಕನ್ನಡದಲ್ಲಿ ಭಾಷಾಂತರಿಸಿದವರಿಗೆ ಬಹುಮಾನಗಳನ್ನು ಕೊಡುವದು; (೩) ಉಪಯೋಗವುಳ್ಳ ಹೊಸ ಪುಸ್ತಕಗಳನ್ನು ಕನ್ನಡದಲ್ಲಿ ಬರೆಯುವವರಿಗೆ ಉತ್ತೇಜನ ಕೊಡುವದು; (೪) ಸರಕಾರದ ಸಂಬಂಧವೇನೂ ಇಲ್ಲದಂತಹ ಯೋಗ್ಯವಾದ ಉಪಯುಕ್ತ ಮಾಸಿಕ ಪುಸ್ತಕಗಳನ್ನು ತೆಗೆಯುವದು; ಅಥವಾ ಈಗಿದ್ದವುಗಳಿಗೆ ಸಹಾಯ ಮಾಡುವದು; (೫) ಹಳೆಯ ಅಥವಾ ಹೊಸ ಪುಸ್ತಕಗಳ ಶುದ್ಧ ಪ್ರತಿಗಳನ್ನು (ಮೂಲವನ್ನು ಅಥವಾ ಟೀಕಾ ಸಹಿತ) ಕನ್ನಡಿಗರಿಗೆ ಒದಗಿಸಿ ಕೊಡುವದು; (೬) ಕನ್ನಡಿಗರಲ್ಲಿ ಮಾತುಗಾರಿಕೆಯನ್ನೂ ಓದುವಭಿರುಚಿಯನ್ನೂ ಬೆಳಿಸುವದು.

ದೇ. ರಾಮಚಂದ್ರರಾವ,

ಸ. ಕಾ. ಕ. ವಿ. ವ. ಸಂಘ, ಧಾರವಾಡ.